# ಶೂದ್ರ

ಬೆಲೆ : 2. ರೂ.



ಈ ಸಂಚಿಕೆಯಲ್ಲಿ

'ಮುಕ್ತ' ಚರ್ಚೆಗಾಗಿ 'ಶೂದ್ರ' ತಿಂಗಳ ಪತ್ರಿಕೆ

ಸಂಪುಟ : 10 ಫೆಬ್ರುವರಿ-ಮಾರ್ಚ್ 1985 ಸಂಚಿಕೆ : 4-5

ಸಹಾಯಕ ಸಂಪಾದಕರು : ನಿರ್ಮಲರೆಡ್ಡಿ—ಆನಂದಮೂರ್ತಿ

ಮುಖಪುಟದ ಕಲಾವಿದರು : ಎನ್. ಮರಿಶ್ಯಾಮಾಚಾರ್
ಹಿಂದಿನ ಪುಟ ಕಲೆ : ಪಿಕಾಸೋವಿನ ಘನಾಕೃತಿ ಕಲೆ
(ಮರಿಶಾಮಾಚಾರ್ ಮತ್ತು ವಿಶ್ವರೂಪಾಚಾರ್ ರವರು ತಂದಿರುವ 'ಕಲಾಕೋಶ' ಕೃತಿಯಿಂದ)

ಶೂದ್ರ ಬರದಿದ್ದರೆ ಪತ್ರ ಬರೆಯಿರಿ. ನೀವು ಅಭಿಮಾನದಿಂದ ಕಳಿಸುವ ಚಂದಾದಿಂದ ಶೂದ್ರ ಬರಬೇಕಾಗಿದೆ. ದಯಮಾಡಿ ಕಳಿಸಿ. ನಿಮಗೆ ತೊಂದರೆಯಾಗದಿದ್ದರೆ ಆಜೀವ ಸದಸ್ಯರಾಗಿ. ಲೇಖನವನ್ನು ಕಳಿಸುವಾಗ ಹದಿನೈದು ಪೈಸೆಯ ರಿಪ್ಲೈಕಾರ್ಡಿಡಿ

ವಾರ್ಷಿಕ ಚಂದಾ : 20ರೂ.
ಆಜೀವ ಚಂದಾ : 200ರೂ. (ನಾಲ್ಕು ಕಂತುಗಳಲ್ಲಿ)

ಶೂದ್ರ ಶ್ರೀನಿವಾಸ್, ಸುದ್ದುಗುಂಟೆಪಾಳ್ಯ, ಡಿ. ಆರ್. ಕಾಲೇಜು ಅಂಚೆ
ಬೆಂಗಳೂರು-560 029

# ಆಲ್ವಿನ್‌ಟಾಫ್ಲರ್‌ನೊಡನೆ ಒಂದು ಸಂದರ್ಶನ :

— ಆ್ಯಂಡ್ರೂಸ್ಮಿತ್

ತ್ : ನಿಮ್ಮ ಪುಸ್ತಕಗಳಾದ Future Shock ಮತ್ತು The third Wave ಗಳು ವೈಯಕ್ತಿಕ ಹಾಗೂ ವಸ್ತುನಿಷ್ಠ ವಿಷಯಗಳ ವಿಸ್ತಾರವಾದ ಶ್ರೇಣಿಯೊಂದನ್ನು ಸಂಕಲಿಸಲೆತ್ನಿಸುವ ನಂಬಲು ಅಸಾಧ್ಯವಾದ ಕಷ್ಟಕರವಾದ ಕಾರ್ಯವನ್ನು ಕೈಗೆತ್ತಿಕೊಂಡಿರುವಂತೆ ನನಗೆ ತೋರುತ್ತದೆ. ಅಂತಹ ದುರ್ಗಮ ಸಾಹಸವನ್ನೇಕೆ ನೀವು ಪ್ರಾರಂಭಿಸಿದಿರಿ ?

---

[ಆಲ್ವಿನ್ ಟಾಫ್ಲರ್ Future Shock ಮತ್ತು The Third Wave ಎಂಬ ವಿಶ್ವಾದ್ಯಂತ, ಬಹಳ ಸುದ್ದಿ ಮಾಡಿರುವ ಗ್ರಂಥಗಳ ಲೇಖಕ. Future Shock ಸಾಮಾಜಿಕ ಬದಲಾವಣೆಯ ಬಗ್ಗೆ ಸಮಾಜ ಶಾಸ್ತ್ರಜ್ಞರ ಚಿಂತನೆಯ ಮೇಲೆ ಪರಿಣಾಮ ಬೀರಿತು. ಟಾಫ್ಲರ್ ಮೊದಲು ಕೆಲವು ಕಾಲ Fortune ಪತ್ರಿಕೆಯ ವರದಿಗಾರನಾಗಿಯೂ ಅನಂತರ ಸಹಸಂಪಾದಕನಾಗಿಯೂ ಕೆಲಸ ಮಾಡಿದ. ಅನಂತರ ಕಾರ್ನೆಲ್ ವಿಶ್ವವಿದ್ಯಾಲಯ, ರಸೆಲ್ ಸೇಜ್ ಫೌಂಡೇಷನ್, ನ್ಯೂಸ್ಕೂಲ್ ಫಾರ್ ಸೋಷಿಯಲ್ ರೀಸರ್ಚ್‌ಗಳಲ್ಲಿ ಬೋಧಿಸಿದ್ದೂ ಉಂಟು. ನಾಲ್ಕು ಪುಸ್ತಕಗಳನ್ನೂ, ಅಸಂಖ್ಯಾತ ಲೇಖನಗಳನ್ನೂ ಬರೆದಿರುವ ಟಾಫ್ಲರ್‌ಗೆ ಐದು ಗೌರವ ಪದವಿಗಳು ದೊರೆತಿವೆ.

ಟಾಫ್ಲರ್‌ನನ್ನು ಸಂದರ್ಶಿಸಿದ ಆ್ಯಂಡ್ರೂಸ್ಮಿತ್ ನ್ಯೂಯಾರ್ಕ್‌ನ Global Perspectives in Eduuaction ನ ಕಾರ್ಯ ನಿರ್ವಾಹಕ ನಿರ್ದೇಶಕ (Executive Director). ಈ ಲೇಖನವನ್ನು ಕನ್ನಡಕ್ಕೆ ಡಾ॥ ಬಿ. ಶಶಿಧರ್ ಮತ್ತು ಜಿ.ಪಿ. ಉಷಾರವರು ತಂದುಕೊಟ್ಟಿದ್ದಾರೆ.

---

ಡಾ॥ ಶಶಿಧರ್, ಅಧ್ಯಾಪಕ, ಶಿಕ್ಷಣ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು–56
ಜಿ.ಪಿ. ಉಷಾ, 495, ಸಿ.ಎಮ್.ಎಚ್. ರಸ್ತೆ, ಇಂದಿರಾನಗರ ಮೊದಲಘಟ್ಟ, ಬೆಂಗಳೂರು-38

ಟಾಫ್ಲರ್ : ಎಲ್ಲಕ್ಕಿಂತಲೂ ಮೊದಲು, ನನ್ನ ಕೃತಿ ಕೇವಲ ನನ್ನೊಬ್ಬನದೇ ಆಗಿರದೆ, ನನ್ನ ಪತ್ನಿ ಹೀದಿ (Heidi) ಯದೂ ಕೂಡ ಆಗಿದೆ ಎಂಬುದನ್ನು ಒತ್ತಿ ಹೇಳಬಯಸುತ್ತೇನೆ.

ಬರೆಯುವವ ನಾನು, ನಾನು ಪುಸ್ತಕಗಳನ್ನು ಸೃಜಿಸುತ್ತೇನೆ ಹಾಗೂ ಕಲ್ಪಿಸುತ್ತೇನೆ. ಆದರೆ ಆಕೆ ಅತಿ ಪ್ರಭಾವಿ. ಮತ್ತು ಕೃತಿಯನ್ನು ರೂಪಿಸುವುದರಲ್ಲಿ ನನಗೆ ಸಹಾಯಮಾಡುವುದರಲ್ಲಿ ಆಕೆ ಒಂದು ಬೌದ್ಧಿಕ ಶಕ್ತಿ ... ... ರೂಪಿಸುವುದು ಮತ್ತು ಬೃಹದಾಕಾರದ ವಿಷಯದ ಮೇಲೆ ನಾನು ಹಿಡಿತ ಸಾಧಿಸುವುದು ಆಂಶಿಕವಾಗಿ, ಆಕೆಯ ಪ್ರೋತ್ಸಾಹ ಮತ್ತು ಒತ್ತಾಯದ ಫಲವಾಗಿ. ಏಕೆಂದರೆ ನಾನು ಸತತವಾಗಿ ಆ ಕೆಲಸವನ್ನು ಮಾಡುವ ಕಷ್ಟವನ್ನು ಕುರಿತು ಅಳುತ್ತಾ, ಪ್ರಲಾಪಿಸುತ್ತಿರುತ್ತೇನೆ. ಆಕೆ ಸದಾ 'ಸಂಶ್ಲೇಷಿಸು, ಸಂಶ್ಲೇಷಿಸು' ಎನ್ನುತ್ತಲೇ ಇರುತ್ತಾಳೆ. ಮತ್ತೆ ಹೀಗೆ ಬೃಹದಾಕಾರವಾಗಿ ಚಿತ್ರಿಸುವ ರೀತಿಯನ್ನು ಪ್ರೋತ್ಸಾಹಿಸಿರುವವಳು ನಿಜವಾಗಿ ಆಕೆ.

ವೈಯುಕ್ತಿಕವಾಗಿ ನಾನು ಯಾವಾಗಲೂ ಸ್ವಂತಿಕೆಗೆ ಮತ್ತು ಕಲ್ಪನೆಗೆ, ಕಲಾತ್ಮಕ ಗುಣಗಳಿಗೆ ಹೆಚ್ಚು ಪ್ರಾಮುಖ್ಯತೆ ನೀಡಿದ್ದೇನೆ. ಇದರೊಡನೆ ನಾನು, ಬೇರೆಯವರು ಸಾಮಾನ್ಯವಾಗಿ ಮಾಡಿರದಂತಹ ಯೋಜನೆಗಳನ್ನು (Projects) ನಿರ್ವಹಿಸಲು ಯತ್ನಿಸುತ್ತೇನೆ. ನನ್ನ ಮೊದಲ ಪುಸ್ತಕ ಅರ್ಥಶಾಸ್ತ್ರ ಮತ್ತು ಸಂಯುಕ್ತ ಸಂಸ್ಥಾನಗಳಲ್ಲಿನ (United States) 'ಕಲೆಯ ಸಮಾಜಶಾಸ್ತ್ರ' ಗಳ ಮೇಲಾಗಿತ್ತು. ಆ ರೀತಿಯ ಪುಸ್ತಕಗಳು ಇಲ್ಲದೆ ಇದ್ದುದರಿಂದ ಆ ಪುಸ್ತಕವನ್ನು ಬರೆದೆ. Future Shock ಒಂದು ಸ್ವಂತ ಕಲ್ಪನೆ, ಒಂದು ಸ್ವಂತ ಕೃತಿಯೆಂದು ನಾನು ನಂಬುತ್ತೇನೆ. ನಾನು ಒಂದು ಪುಸ್ತಕವನ್ನು ಬರೆಯುವ ಸಮಯದಲ್ಲಿ, ಉದಾಹರಣೆಗೆ ಬಡತನದ ಬಗೆಯಾಗಲೀ ಅಥವಾ ಜನಾಂಗದ ಬಗ್ಗೆಯಾಗಲೀ ಅಥವಾ ನನ್ನನ್ನು ಗಹನವಾದ ಚಿಂತೆಗೀಡು ಮಾಡಿರುವ ವಿಷಯಗಳಲ್ಲೊಂದರ ಬಗ್ಗೆ ಪುಸ್ತಕವೊಂದನ್ನು ಬರೆಯಬೇಕಾದಾಗ ನನಗೆ ಪ್ರೋತ್ಸಾಹ ದೊರೆತದ್ದು ಜ್ಞಾಪಕವಿದೆ; ಆದರೆ ಆ ವಿಷಯಗಳ ಬಗ್ಗೆ ಬರೆದಿರುವ ಪುಸ್ತಕಗಳ ಹೇರಳವಾಗಿದೆ. ನಾನು Future Shock ಅನ್ನು ಬರೆದ ಸಮಯದಲ್ಲಿ ಆ ವಿಷಯದ ಬಗ್ಗೆ ಯಾವ ಪುಸ್ತಕವೂ ಇರಲಿಲ್ಲ. ಒಟ್ಟಿನಲ್ಲಿ ಭವಿಷ್ಯದ ಬಗೆಗಿನ ಪುಸ್ತಕಗಳು ಕೆಲವೇ ಇದ್ದುವು. ಆದ್ದರಿಂದ ನಾನು ಹೊಸ ದಿಕ್ಕಿನಲ್ಲಿ ಹೊರಟೆ. ಜನಜಂಗುಳಿಯಿಂದ ದೂರ ಸರಿದೆ. ಪ್ರತಿಯೊಬ್ಬರೂ ಪ್ರವೀಣರೇ (Specialists) ಆಗುತ್ತಿದ್ದರೆ ಯಾರಾದರೊಬ್ಬರು ಸಂಶ್ಲೇಷಕ (Synthesist) ರಾಗಲು ಸೂಕ್ತ ಸಮಯ.

The Third Wave ಹಾಗೂ Future Shock ಗಳಲ್ಲಿ ಪ್ರತಿಪಾದಿಸಲಾಗಿರುವ ನಿಜಕ್ಕೂ ಪ್ರಮುಖವಾದ ಅನೇಕ ಅಂಶಗಳಲ್ಲಿ, ನಾವು ನಮ್ಮ

ಃ ಂತನಾಶೈಲಿಯಲ್ಲಿ ಪರಮಾಣವಾದಿಗಳಾಗಿದ್ದೇವೆ. (atomistic) ಪರಿಣತ ರಾದವರೊಡನೆ ಸಂವಾದಿಸಲು ನಾವು ಅಸಹಾಯಕರಾಗುತ್ತೇವೆ. ನೀವು ಮಾಡುತ್ತಿರುವುದು ಆ ಕಂದಕಗಳನ್ನು ಮುಚ್ಚುವ ಕೆಲಸವೇನು ?

ಒಂದು ರೀತಿಯಲ್ಲಿ ನಾನು ಈ ಎರಡೂ ಗುಂಪುಗಳ ನಡುವೆ ಒಬ್ಬ ರಾಯಭಾರಿ ಯೆಂದು ಸ್ವಯಂ ನನ್ನನ್ನು ಗೌರವಿಸಿಕೊಳ್ಳುತ್ತೇನೆ.... ಉದಾಹರಣೆಗೆ ವಿಜ್ಞಾನಿಗಳ ಮತ್ತು ಮಾನವತಾವಾದಿಗಳ ಗುಂಪುಗಳ ನಡುವೆ. ನಾನು ಒಂದು ಮಾದರಿಯನ್ನು (model) ಸೃಜಿಸಲು ಯತ್ನಿಸುತ್ತೇನೆ. The third Wave ನಲ್ಲಿ ನಾನು ಒಂದು ಮಾದರಿಯನ್ನು ಸೃಜಿಸಿದೆ. ಅದನ್ನು ಸಮಾಜ ಪಾಠಗಳ (Social Studies) ಯಾವುದೇ ಅಧ್ಯಾಪಕ ಶೀಘ್ರವಾಗಿ ಗ್ರಹಿಸಬಹುದು ಮತ್ತು ಉಪಯುಕ್ತ ರೀತಿಯಲ್ಲಿ ಕೂಡ ಕೌಶಲ್ಯದಿಂದ ನಿರ್ವಹಿಸಬಹುದು ಎಂದುಕೊಳ್ಳುತ್ತೇನೆ. ಅದು ಗಣಿತದ ಮಾದರಿಯೂ ಅಲ್ಲ, ವೈಜ್ಞಾನಿಕ ಮಾದರಿಯೂ ಅಲ್ಲ. ಆದರೆ ಅದು ವಸ್ತುಗಳ ಬೃಹತ್ ಸಮೂಹವೊಂದರೊಡನೆ ಸೆಣಸುವ ಮತ್ತು ಅದನ್ನು ವ್ಯವಸ್ಥಿತ ಗೊಳಿಸುವ ಒಂದು ರೀತಿ.

ಅನೇಕ ಸಮಾಜ ವಿಜ್ಞಾನಿಗಳು ಆಧಾರಾಂಶಗಳು (Data) ವ್ಯಕ್ತಿ ಸ್ವರೂಪ ವಿಲ್ಲವಾಗಿರಬೇಕು. (Impersonal) – ಆಧಾರಾಂಶಗಳು ಪರಿಮಾಣಿಸಲ್ಪಟ್ಟಿದ್ದರೆ ಅಥವಾ ಮುದ್ರಣಗೊಂಡಿದ್ದರೆ ಮಾತ್ರ ಆಧಾರಾಂಶಗಳು ಎಂದು ಒತ್ತಾಯಿಸುತ್ತಾರೆಂದು ನಾನು ನಂಬುತ್ತೇನೆ.

ನಿಜವಾಗಿಯೂ ನಾನು ನಿಯತ ಕಾಲಿಕಗಳಲ್ಲಿ (Journals) ಏನಿದೆ ಎಂದು ತಿಳಿಯ ಬಯಸುತ್ತೇನೆ. ಮುದ್ರಣಗೊಳ್ಳುವ ಹೊತ್ತಿಗೆ ನಿಯತ ಕಾಲಿಕಗಳಲ್ಲಿನ ಲೇಖನ ಗಳು ಹಳತಾಗಿ ಹೋಗಿದ್ದರೂ ಸಹ. ಆದರೆ, ಪ್ರಪಂಚವನ್ನು ಅರಿಯುವ ನನ್ನ ಪ್ರಯತ್ನದಲ್ಲಿ ನನ್ನ ಕಿವಿ, ಮೂಗು ಮತ್ತಿತರ ಜ್ಞಾನೇಂದ್ರಿಯಗಳನ್ನು ಕೂಡ ಬಳಸು ತ್ತೇನೆ. ನಾನು ಸಂದರ್ಶಿಸುತ್ತೇನೆ. ಅನ್ವೇಷಿಸುತ್ತೇನೆ. ನಾನು ಕೇವಲ ವಿದ್ವಾಂಸ ರೊಡನೆ ಮಾತ್ರವಲ್ಲದೆ ಕೆಲಸ ಮಾಡುವ ಜನರೊಡನೆ, ವ್ಯಾಪಾರ ಮಾಡುವ ಜನರೊಡನೆ ಮಾತನಾಡುತ್ತೇನೆ. ನಾನು ಮಾಡುತ್ತಿರುವ ಅಥವಾ ಮಾಡಲೆತ್ನಿಸುತ್ತಿರುವ ವಿಧಾನದ ಬಗ್ಗೆ ಹೇಳುವುದಾದರೆ, ಅದು ಕೆಲವೊಮ್ಮೆ ನಾನು ಕರೆಯುವಂತೆ ಶ್ರೀಮಂತ ಗೊಳಿಸಲ್ಪಟ್ಟ ಪತ್ರಿಕೋದ್ಯಮ (Enriched Journalism) – ಪಾಂಡಿತ್ಯ ಮತ್ತು ಪತ್ರಿಕೋದ್ಯಮದ ಒಂದು ಸಂಯೋಗ. ಅದು ಅಪಾರ ಹಣ ಮತ್ತು ಸಂಚರಿಸಲು ಸಮಯ ಲಭ್ಯವಿದ್ದರೆ, ಹಾಗೆಯೇ ಕಥೆ ಎಲ್ಲಿದೆಯೋ ಅಲ್ಲಿಗೆ ಹೋಗಬಲ್ಲ ಸಾಮರ್ಥ್ಯವಿದ್ದರೆ ಒಬ್ಬ ಪತ್ರಿಕೋದ್ಯಮಿ ಮಾಡುವಂತಹದ್ದು. ನಾನು ಅವಲೋಕನ

ದೊಡನೆ (observation) ವಿಶ್ಲೇಷಣೆ (analysis) ಮತ್ತು ಸಂಶ್ಲೇಷಣೆ (synthesis) ಯನ್ನು ಬೆಸೆಯಲು ಯತ್ನಿಸುತ್ತೇನೆ. ಮತ್ತು ನಾನು ಸ್ಪಷ್ಟವಾಗಿ ಸಂವಾದಿಸಲು ಬಹಳ ಶ್ರಮವಹಿಸುತ್ತೇನೆ. ಪುಸ್ತಕಗಳನ್ನು, ನಾನು ಜನರ ಮೇಲೆ ಪ್ರಭಾವ ಬೀರಲು ಬಳಸುತ್ತೇನೆ.

ಜನ ಸಾಮಾನ್ಯರಿಂದ ಓದಬಹುದಾದ ಪುಸ್ತಕಗಳು ಮತ್ತು ಹೊಸ ಕಲ್ಪನೆಗಳೂ ಕೂಡ ?

ಹೌದು, ಇದನ್ನೇ 'ಹೊಸದಾದ ಸಂಶ್ಲೇಷಣೆಯೊಂದನ್ನು ಸೃಜಿಸುತ್ತಿದ್ದೇವೆ' ಎಂದು ನಾವು ಮಾಡುತ್ತಿರುವುದು ಎಂದು ನಂಬಿದ್ದೇನೆ.

ಕೈಗಾರಿಕಾ ಕ್ರಾಂತಿಯು ಕಾರ್ಟೇಷಿಯನ್ ಚಿಂತನೆಯನ್ನು ಮತ್ತು ವಿಷಯವನ್ನು (Information) ಪರಮಾಣುಗಳನ್ನಾಗಿಸುವಿಕೆ (atomization) ಮತ್ತು ವಿಷಯ ಪ್ರಾವೀಣ್ಯತೆ (Specialisation) ಗಳನ್ನು ವಿಶ್ವವ್ಯಾಪಿಯನ್ನಾಗಿಸಿತು. ಉದಾಹರಣೆಗೆ, ವೃತ್ತಪತ್ರಿಕೆಯು ಕಾರ್ಟೇಷಿಯನ್ ಚಿಂತನೆಯ (Cortesian Thinking) ಒಂದು ಪರಿಪೂರ್ಣ ಸರಬರಾಜುದಾರ (Perfect Purveyor). ನೀವು ಯಾವುದೇ ಒಂದು ವೃತ್ತಪತ್ರಿಕೆಯ ಮೊದಲನೆಯ ಪುಟವನ್ನು ನೋಡಿದಾಗ ಒಂದರೊಡನೊಂದು ಬಾಹ್ಯ ಸಂಬಂಧವಿಲ್ಲದಿರುವಂತಹ ಹತ್ತು ಕಥೆಗಳನ್ನು ಕಾಣುತ್ತೀರಿ ಅವು ಪುಟ್ಟ ಮೂಲಮಾನಗಳು (little modules) – ಸಂಬಂಧ ಹೊಂದಿರದ ಆಧಾರಾಂಶಗಳ ಮೂಲಮಾನಗಳು. ನಮ್ಮ ವೃತ್ತಪತ್ರಿಕೆಗಳು, ಮತ್ತು ಟೆಲಿವಿಷನ್ ವಾಸ್ತವತೆಯನ್ನು ಬೇರೆ ಬೇರೆ ಚೂರುಗಳನ್ನಾಗಿ ಛಿದ್ರಿಸುತ್ತವೆ. ಸಂಶ್ಲೇಷಿಸುವ ಉಪಕರಣ ಅವುಗಳಿಗೆ ಲಭ್ಯವಿಲ್ಲ.

ಅವು, ಆ ಅರ್ಥದಲ್ಲಿ ಓದುಗರನ್ನು ಗೊಂದಲಕ್ಕೀಡು ಮಾಡುವುದು ಮತ್ತು ವಾಸ್ತವತೆಯ ಗೊಂದಲದ ಚಿತ್ರವೊಂದನ್ನು ಸೃಜಿಸುವುದು ಖಂಡಿತ. ನಮ್ಮ ಸುತ್ತ ಮುತ್ತಲೂ ಆಗುತ್ತಿರುವ ಬದಲಾವಣೆಗಳಲ್ಲಿ ಅತಿ ಪ್ರಭಾವೀ ಮಾದರಿಗಳಿವೆ (Patterns). ಆದರೆ ಅವುಗಳನ್ನು ನೀವು ನಿಮ್ಮ ದೈನಂದಿನ ವೃತ್ತಪತ್ರಿಕೆಯಿಂದಾಗಲೀ ಅಥವಾ ಸಂಜೆಯ ವಾರ್ತಾವರದಿಯಿಂದಾಗಲೀ ಪತ್ತೆಹಚ್ಚುವುದು ಎಂದಿಗೂ ಸಾಧ್ಯವಿಲ್ಲ. ಸಮಾಜ ಪಾಠಗಳಲ್ಲಿನ (Social Studies) ಜನರು ಸಂಶ್ಲೇಷಿಸುವ ಕಾರ್ಯವನ್ನು ಕೈಗೊಳ್ಳಬೇಕಾದ ವಿಶೇಷ ತುರ್ತು ಪರಿಸ್ಥಿತಿ ಇದೆಯೆಂದು ನನಗೆ ತೋರುತ್ತದೆ. ನಾವು ವಿದ್ಯಾರ್ಥಿಗಳಿಗೆ ವೃತ್ತಪತ್ರಿಕೆಯೊಂದರಲ್ಲಿನ ಮೊದಲನೆಯ ಪುಟಕ್ಕೂ, ವಾಣಿಜ್ಯ ವ್ಯವಹಾರಗಳ ಪುಟಕ್ಕೂ ಸಂಬಂಧ ಹುಡುಕುವುದನ್ನು ಹೇಳಿ

ಕೊಡಬೇಕಾದ ಅವಶ್ಯಕತೆಯಿದೆ. ಉದಾಹರಣೆಗೆ ಮಾನವ ಶಾಸ್ತ್ರೀಯ (anthropological) ಬದಲಾವಣೆಗಳು ಮತ್ತು ಮಲಿನತೆಯ (Pollution) ನಡುವೆ, ಮತ್ತು ಶಕ್ತಿ (energy) ಹಾಗೂ ಕೌಟುಂಬಿಕ ಜೀವನಗಳ ನಡುವೆ .... ಅಡಗಿರುವ ಆ ಎಲ್ಲಾ ಸಂಬಂಧಗಳನ್ನು ಹುಡುಕುವುದನ್ನು ಹೇಳಿಕೊಡಬೇಕಾಗಿದೆ. ಅದನ್ನೇ ನನ್ನ ಎಲ್ಲ ಕೃತಿಗಳೂ ಮಾಡಲು ಯತ್ನಿಸುವುದು.

ನಿಮ್ಮ Future Shock ಮತ್ತು The Third Wave ಗಳಲ್ಲಿ ನೀವು ಸಂಯುಕ್ತ ಸಂಸ್ಥಾನಗಳಲ್ಲಿ (United States), ಪ್ರಸ್ತುತ ಶಾಲೆಗಳು ಇರುವ ರೀತಿಯ ಬಗ್ಗೆ ಬಹಳಷ್ಟು ವಿಮರ್ಶೆ ಮಾಡಿದ್ದೀರಿ. ಎರಡನೆಯ ಅಲೆಯ (Second Wave) ಶಾಲೆಯ ಬಗೆಗಿನ ನಿಮ್ಮ ವಿಮರ್ಶೆಯನ್ನು ವಿವರಿಸಲು ಸಾಧ್ಯವೇ ?

ಸಾಧ್ಯ. ಎರಡನೆಯ ಅಲೆಯ ಶಾಲೆಯ ಗುಣ ವಿವರಣೆ ಮಾಡುವುದು ಸುಲಭ. ಕಳೆದ ನೂರು ಅಥವಾ ಇನ್ನೂ ಹೆಚ್ಚಿನ ವರ್ಷಗಳತ್ತ ತಿರುಗಿ ನೋಡಿದರೆ ಎರಡನೆಯ ಅಲೆಯ ಸಮಾಜ, ಸಾಂಪ್ರದಾಯಿಕ ಕೈಗಾರಿಕಾ ಸಮಾಜಕ್ಕೆ (classical industrial society) ಒಂದು ನಿರ್ದಿಷ್ಟ ಬಗೆಯ ಕಾರ್ಮಿಕ ಬಲ ಬೇಕಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ. ವ್ಯವಸ್ಥಿ ಕಾರ್ಯ ನಿರ್ವಹಿಸಲು ವೇಳೆಗೆ ಸರಿಯಾಗಿ ಕಾರ್ಖಾನೆಗೆ ಬರುವ, ಆಜ್ಞೆಗಳನ್ನು ಸ್ವೀಕರಿಸುವ, ಪುನರಾವರ್ತನೆಯ ಕೆಲಸವನು ಮಾಡುವ ಕೆಲಸಗಾರರು ಆ ಸಮಾಜಕ್ಕೆ ಬೇಕಾಗಿತ್ತು. ಅರಿವಿಲ್ಲದಂತೆಯೇ ಅದರಿಂದ ಶಾಲಾವ್ಯವಸ್ಥೆಯೊಂದು ರೂಪುಗೊಂಡಿತು. ಮೇಲ್ಮೈಗೆ ಅದು, ಒಂದು ಕೈಗಾರಿಕಾ ದೇಶದಿಂದ ಇನ್ನೊಂದಕ್ಕೆ ಬದಲಾದಂತೆ ತೋರಿಬಂದರೂ, ಮೇಲ್ಮೈಯ ಕೆಳಗಡೆ ಕೆಲವು ಮೂಲಭೂತ ಹೋಲಿಕೆಗಳನ್ನು ಹೊಂದಿತ್ತು. ಹೀಗೆ ಪ್ರತಿಯೊಂದು ಶಾಲಾವ್ಯವಸ್ಥೆಯಲ್ಲೂ ಒಂದು ಬಾಹ್ಯ ಪಠ್ಯ ಪದ್ಧತಿ (overt curriculum) ಮತ್ತು ಆಂತರಿಕ ಪಠ್ಯಪದ್ಧತಿ (covert curriculum) ಇದೆ.

ಬಾಹ್ಯ ಮಟ್ಟದಲ್ಲಿ ಸ್ಥಳದಿಂದ ಸ್ಥಳಕ್ಕೆ ವ್ಯತ್ಯಾಸಗಳಿವೆ. ನಾವು ಅಮೇರಿಕಾದ ಚರಿತ್ರೆಯನ್ನು ಬೋಧಿಸುತ್ತೇವೆ. ಜಪಾನೀಯರು ಜಪಾನಿನ ಚರಿತ್ರೆಯನ್ನು ಬೋಧಿಸುತ್ತಾರೆ. ಆದರೆ ಆಂತರ್ಯದಲ್ಲಿ ಎಲ್ಲ ವ್ಯವಸ್ಥೆಗಳೂ ಮೂರು ಮೂಲ ಪಠ್ಯಕ್ರಮಗಳನ್ನು (course) ಬೋಧಿಸುತ್ತವೆ. ಮೊದಲನೆಯದು ಕಾಲನಿಷ್ಠೆಯ (punctuality) ಒಂದು ಪಠ್ಯಕ್ರಮ ಮಕ್ಕಳು ಕ್ಲುಪ್ತ ಸಮಯಕ್ಕೆ ಸರಿಯಾಗಿ ಬರಬೇಕು ಇಲ್ಲವೇ ಶಿಕ್ಷಿಸಲ್ಪಡಬೇಕು. ಎರಡನೆಯದು ವಿಧೇಯತೆಯಲ್ಲೊಂದು ಪಠ್ಯಕ್ರಮ ಮಕ್ಕಳಿಗೆ ಯೋಚನೆ ಮಾಡುವುದನ್ನು ಮತ್ತು ಪ್ರಶ್ನಿಸುವುದನ್ನು ಹೇಳಿಕೊಡುತ್ತೇವೆ

ಎಂದು ಹೆಮ್ಮೆಪಟ್ಟುಕೊಳ್ಳುವ ಶಾಲೆಗಳಲ್ಲಿ ಕೂಡ ಅತಿ ಚುರುಕಾದ ಮಕ್ಕಳು, ಯಾವ ಪ್ರಶ್ನೆಗಳನ್ನು ಕೇಳಬಾರದು ಎಂಬುದನ್ನು ಶೀಘ್ರವಾಗಿ ಕಂಡುಕೊಳ್ಳುತ್ತಾರೆ. ಶಾಲೆಯು ದಿನಚರಿಯು ಹಾಗೂ ಪುನರಾವರ್ತತೆಯು ದುಡಿಮೆಯು ಜೀವನಕ್ಕೆ ಮಂಗುವನ್ನು ತಿದ್ದುವ ಕೆಲಸವನ್ನು ಹೊಂದಿದೆ.

ಈ ಅರ್ಥದಲ್ಲಿ ಕೈಗಾರಿಕಾ ಯುಗದ ಶಾಲೆಗಳು ಜೀವನವು ತನ್ನಲ್ಲಿ ಏನನ್ನು ಅವಿತಿರಿಸಿಕೊಂಡಿದೆ ಎಂಬುದರ ಅತೀ ಸಮರ್ಥ ನಿರೀಕ್ಷೆಗಳಾಗಿದ್ದುವು. ಅವು ವಯಸ್ಕ ಜೀವನದ ಪ್ರೌಢ ರೂಪಾಂತರವನ್ನು ನೀಡುತ್ತಿದ್ದುವು. ಅದು ಪ್ರಾಯಶಃ ಶಾಲೆಗಳಿಗೆ ಮಾಡಲು ಒಂದು ಸಮಂಜಸವಾದ ಸಂಗತಿಯಾಗಿತ್ತು.

ಸಮಸ್ಯೆಯೆಂದರೆ ಮಗುವು ಪ್ರವೇಶಿಸಲಿರುವ ಪ್ರಪಂಚಕ್ಕೆ ಆ ಗುಣಗಳು ಇನ್ನೇನೂ ಬೇಕಾಗದಿದ್ದರೂ ಕೂಡ. ವ್ಯವಸ್ಥೆಯು ಇನ್ನೂ ಅದೇ ಆಂತರಿಕ ಪಠ್ಯಪದ್ಧತಿಯನ್ನು ಬೋಧಿಸುತ್ತಿದೆ. ಭವಿಷ್ಯದಲ್ಲಿ ನಮಗೆ ಬೇಕಾಗುವಂತಹ ಕಾರ್ಮಿಕ ಬಲ ಆ ರೀತಿಯದಲ್ಲ. ಆದುದರಿಂದ ಈ ಬಗೆಯ ಶಿಕ್ಷಣದ ರೀತಿಯಲ್ಲಿ ಮೂಲಭೂತ ಬದಲಾವಣೆಗಳಿಗೆ ಪಕ್ವವಾದ ಕಾಲ ಬಂದಿದೆಯೆಂದು ನಾನು ಯೋಚಿಸುತ್ತೇನೆ.

ಮೂರನೆಯ ಅಲೆಯಲ್ಲಿ ಜೀವನ ಹೇಗಿರಬಹುದು ?

ಅದಕ್ಕೊಂದು ಸಂಕ್ಷಿಪ್ತವಾದ ಉತ್ತರವಿಲ್ಲ. The Third Wave ನಲ್ಲಿ ನಾನು ತಾತ್ಕಾಲಿಕವಾದರೂ ಕ್ರಮಬದ್ಧವಾದ ಉತ್ತರವೊಂದನ್ನು ಒದಗಿಸಲು ಯತ್ನಿಸಿದ್ದೇನೆ. ತಾತ್ಕಾಲಿಕ, ಏಕೆಂದರೆ ಜೀವನವು ನಾವದನ್ನು ಮಾಡಿದಂತೆ ಇರುತ್ತದೆ. ಇಂದು ನಾವು ಕೈಗೊಳ್ಳುವ ನಿರ್ಧಾರಗಳು ನಮ್ಮ ಮುಂದಿನ ಜೀವನ ಹೇಗಿರುತ್ತದೆ ಎಂಬುದನ್ನು ನಿರ್ಧರಿಸುತ್ತವೆ. ಆದಾಗ್ಯೂ The Third Wave ನಲ್ಲಿ ಪ್ರತಿಪಾದಿಸಲಾಗಿರುವ ವಾದವೆಂದರೆ, ನಾವು ನಿರಾಶರಾಗಬಾರದು, ನಮ್ಮನ್ನು ನಾವು ಫ್ಯಾಷನ್ ಆಗಿರುವ ನಿರಾಶಾವಾದದಿಂದ ನಿಶ್ಚೇತರಾಗಲು ಬಿಡಬಾರದು. ರಚನಾತ್ಮಕವಾದ ವೈಯುಕ್ತಿಕ ಹಾಗೂ ಸಾಮಾಜಿಕ ಆಯ್ಕೆಗಳು (social options) ನಮಗೆ ಲಭ್ಯವಿದೆ. ಇಂದು ಭವಿಷ್ಯದ ಬಗೆಗಿನ ನಮ್ಮ ವಿಚಾರ ವಿಮರ್ಶೆಗಳು – ವಿಶ್ವದ ಆರ್ಥಿಕ ನಿರ್ವಹಣೆ, ಬಡ್ಡಿಯ ದರಗಳು ಇತ್ಯಾದಿಗಳ ವಿವರಣೆಗಳಿರುವ ವಾಣಿಜ್ಯ ವ್ಯವಹಾರಗಳಲ್ಲಿನ ಪುಟಗಳಲ್ಲಿಯಾಗಲೀ, ಅಥವಾ ಪರಿಸರದ ಸಮಸ್ಯೆ, ಅಥವಾ ಆಹಾರದ ಸಮಸ್ಯೆ, ಇತ್ಯಾದಿಗಳ ಬಗೆಗಿನ ಸರಕಾರೀ ವರದಿಗಳಲ್ಲಿಯಾಗಲೀ - ಭವಿಷ್ಯದ ಬಗೆಗಿನ ಚರ್ಚೆಯು ನಮಗೆ ಬೇರೆ ಯಾವ ದಾರಿಯೂ ಇಲ್ಲವೇನೋ, ಕುರುಡುಗಲ್ಲಿಯಿಂದ ಮೋಕ್ಷವೇ ಇಲ್ಲವೇನೋ ಎಂಬಂತೆ ಅತಿ ನಿರಾಶಾದಾಯಕ ಭಾಷೆಯಲ್ಲಿ ಹುದುಗಿಸಲ್ಪಟ್ಟಿವೆ.

ಅದು ಸುಳ್ಳು. ಅದು ಏಕೆ ಪರಿಮಾಣಾತ್ಮಕ ಚಿಂತನೆಯು (linear thinking) ಅಪಾಯಕಾರೀ ಫಲವೆಂದು ನಾನು ನಂಬುತ್ತೇನೆ.

**ಸಾಂಪ್ರದಾಯಿಕ ಶಿಕ್ಷಣಕ್ಕೆ (Formal education) ಇನ್ನೂ ನಿರ್ವಹಿಸಲು ಪಾತ್ರವೊಂದಿರುತ್ತದೆ ಎಂದು ನೀವು ಯೋಚಿಸುತ್ತೀರಾ ?**

ಹೌದು. ಉದಾಹರಣೆಗೆ ನಾವು ವಿದ್ಯಾರ್ಥಿಗಳ, ಅಧ್ಯಾಪಕರ ಮತ್ತು ಸಮುದಾಯದ ಜನರ ತಂಡಗಳನ್ನು ಶೈಕ್ಷಣಿಕ ಅನುಭವ ಪಡೆಯುವ ಕಾರ್ಯಕ್ರಮದ ಅಂಗವಾಗಿ ಸಮುದಾಯದಲ್ಲಿ ಕೆಲಸ ಮಾಡಲು ಕಳುಹಿಸುವುದರ ಮೂಲಕ ಕ್ರಿಯಾತ್ಮಕ ಕಲಿಕೆಯ (Action learning) ಕಡೆಗೆ ಹೊರಳಿದೆವು. ತಾವು ಹೊರ ಪ್ರಪಂಚದಲ್ಲಿ ಕೆಲಸ ಮಾಡುತ್ತ ಕಲಿಯುತ್ತಿರುವುದನ್ನು ವಿಸ್ತರಿಸುವ ಸಲುವಾಗಿ ಅವರು ಒಟ್ಟಾಗಿ ಮರಳಿ ಬರಲು ಮತ್ತು ಒಟ್ಟಾಗಿ ತಮ್ಮ ಅನುಭವಗಳ ಮೌಲ್ಯ ನಿಷ್ಕರ್ಷೆ ಮಾಡಲು ಒಂದು ಸ್ಥಳದ ಆವಶ್ಯಕತೆಯಿಂದೆ.

**ಮೂರನೆಯ ಅಲೆಯ ಶಾಲೆಯು ಸಮುದಾಯ ಪಾಲ್ಗೊಳ್ಳುವುದನ್ನು ಹೆಚ್ಚಾಗಿ ಹೊಂದಿರಬಹುದಲ್ಲವೇ ?**

ಖಂಡಿತವಾಗಿ ಸಮುದಾಯದೊಡನೆ ಹೆಚ್ಚು ಮಿಳಿತಗೊಂಡಿರುತ್ತದೆ ತರಗತಿಯ ಹೊರಗಡೆ ಹೆಚ್ಚಿನ ಪಾಲಿನ ಶಿಕ್ಷಣ ಪಡೆಯಲು ಸಾಧ್ಯ, ಹಾಗೂ ನಡೆಯಬೇಕು. ವಿದ್ಯಾರ್ಥಿಗಳ ಒಂದು ತಂಡ ಮತ್ತು ಒಬ್ಬ ಅಧ್ಯಾಪಕನಿಗೆ ಇದು ಒಂದು ಮಾದರಿಯಾಗಬಹುದು. ಮೊದಲು ಸಮುದಾಯದ ಸಮಸ್ಯೆಯೊಂದನ್ನು ಗುರುತಿಸುವುದು ಸಮುದಾಯದಿಂದ ಕೆಲವು ಜನರನ್ನು ತಂಡಕ್ಕೆ ಸೇರಿಸಿಕೊಳ್ಳುವುದು. ಅನಂತರ ಎಲ್ಲರೂ ಒಂದಾಗಿ ಆ ಸಮಸ್ಯೆಯನ್ನು ಬಿಡಿಸಲು ಯತ್ನಿಸುವುದು. ಆ ಬಗೆಯ ಸಮಸ್ಯೆಗಳು ಪರಿಸರದ ಮಲಿನತೆ, ವೃದ್ಧರ ಯೋಗಕ್ಷೇಮ, ವಾಹನ ಸಂಚಾರ, ಶಬ್ದ ನೈರ್ಮಲ್ಯ, ಸಂಕಟ ಸಮಯದಲ್ಲಿ ಸಲಹೆ ನೀಡುವಿಕೆ (crisis counselling) ಇತ್ಯಾದಿಗಳಿಗೆ ಸಂಬಂಧಿಸಿರಬಹುದು. ಸ್ಥಳೀಯ ಸಮುದಾಯದ ಸಮಸ್ಯೆಗಳನ್ನು ನಿವಾರಿಸಲು ಯತ್ನಿಸುವುದರಲ್ಲಿ ತಕ್ಷಣ ಎದುರಿಸಬೇಕಾದ ವಿದ್ವತ್ ಪ್ರಶ್ನೆಗಳಿವೆ.

ವೃದ್ಧರ ಯೋಗಕ್ಷೇಮದ ಸಮಸ್ಯೆಯ ಬಗ್ಗೆ ನಾನು ಕಾರ್ಯನಿರತನಾಗಿದ್ದರೆ, ನಾನು ಕೂಡಲೇ ಸಮುದಾಯದಲ್ಲಿ ಲಭ್ಯವಿರುವ ಆರೋಗ್ಯ ಸೌಲಭ್ಯಗಳ ಬಗ್ಗೆ ತಿಳಿದುಕೊಳ್ಳಬೇಕು. ಇದು ನನ್ನನ್ನು ಸಾಮಾನ್ಯ ವಿಜ್ಞಾನ ಮತ್ತು ಜೀವವಿಜ್ಞಾನಗಳತ್ತ ಕೊಂಡೊಯ್ಯುತ್ತದೆ. ನಾನು ಸ್ಥಳೀಯ ಸರ್ಕಾರದ ಅರ್ಥವ್ಯವಸ್ಥೆಯ ಬಗ್ಗೆಯೂ ಸ್ವಲ್ಪ ತಿಳಿದುಕೊಳ್ಳಬೇಕು. ಇದು ನನ್ನನ್ನು ಸರ್ಕಾರ (Government)

ಮತ್ತು ಪೌರನೀತಿ (civics) ಗಳಲ್ಲಿಗೆ, ಕೊಂಡೊಯ್ಯುತ್ತದೆ. ಸಂಬಂಧಿಸಿದ ಸಾಮಾಜಿಕ ಅಂಕಿಅಂಶಗಳನ್ನು ಸರಿಯಾಗಿ ನಿರೂಪಿಸಲು ಸಾಧ್ಯವಾಗಲು ಗಣಿತದ ಬಗ್ಗೆಯೂ ನಾನು ಅರಿಯಬೇಕಾಗುತ್ತದೆ.

ಯಾವುದೇ ಮೂರ್ತ (concrete) ಸಮಸ್ಯೆಯಿಂದ ಯಾರೇ ಆದರೂ ಪ್ರಾರಂಭಿಸಿ, ಕಲಿಯಬೇಕಾದ ಅಕ್ಯಾಡಮಿಕ್ ವಿಷಯಂಗಳಿಗೆ ವಿಸ್ತರಿಸಬಹುದು. ಸಮುದಾಯದ ಸೇವೆಯೊಡನೆ ಕಲಿಯುವಿಕೆಯನ್ನು ಸೇರಿಸುವುದರಿಂದ ಅನೇಕ ಸಂಗತಿಗಳು ಏಕಕಾಲದಲ್ಲಿ ಉಂಟಾಗುತ್ತದೆ. ಮೊದಲಿಗೆ ನಾವು ವಿದ್ಯಾರ್ಥಿಗಳನ್ನು ಪ್ರೇರೇಪಿಸುತ್ತೇವೆ. ಆದ್ದರಿಂದ ಅವರು, 'ಆದರೆ ಇದನ್ನು ಏಕೆ ಕಲಿಯಬೇಕು' ಎಂದು ಕೇಳುವುದಿಲ್ಲ. ಉತ್ತರ ಸುಸ್ಪಷ್ಟ. ಸಮುದಾಯವು ಒಂದು ಸಮಸ್ಯೆಯನ್ನು ಹೊಂದಿದೆ. ಅದನ್ನು ಅದು ನಿಮ್ಮ ಸಹಾಯವಿಲ್ಲದೆ ಬಗೆಹರಿಸಲಾರದು. ನೀವು ಸಹಾಯ ಮಾಡಬೇಕಾದರೆ, ನಿಮಗೆ ನಿರ್ದಿಷ್ಟ ಜ್ಞಾನ ಬೇಕು. ಆದ್ದರಿಂದ ವಿದ್ಯಾರ್ಥಿಗಳು ಕಲಿಯಬೇಕು. ನಿಜವಾದ ಸಾಮಾಜಿಕ ಗುರಿ ಇರುವುದರಿಂದ ಕಲಿಯಬೇಕೇ ಹೊರತು ನಾನು ಹೇಳುತ್ತೇನೆ ಎನ್ನುವುದಕ್ಕಾಗಿ ಅಲ್ಲ.

ಎರಡನೆಯದಾಗಿ, ನಾವು ವಿದ್ಯಾರ್ಥಿಗಳದೇ ಆದ ಕೆಲವು ಸಾಮಾಜಿಕ ಸಮಸ್ಯೆಗಳನ್ನು ಪರಿಹರಿಸಲು ಅವರಿಗೆ ಸಹಾಯ ಮಾಡತೊಡಗುತ್ತೇವೆ. ಹೆಚ್ಚೂ ಕಡಿಮೆ ವಿದ್ಯಾರ್ಥಿಗಳದು ಒಂಟಿತನ ತಾಂಡವವಾಡುತ್ತಿರುವ ಜನಸಮೂಹ. ನಾವು ಒಟ್ಟಾಗಿ ಹೆಣೆಯಲ್ಪಟ್ಟಿರುವ ಸಂಬಂಧಗಳಿರುವ ತಂಡವೊಂದನ್ನು ನಿರ್ಮಿಸಬಹುದು. ಈ ತಂಡ ಅನೇಕ ವರ್ಷಗಳ ಕಾಲ ಉಳಿಯಬಹುದು ಇದು ಬಹು ಅಸ್ಥಿರವಾದ, ವಚನ ಬದ್ಧರಲ್ಲದ ಜನರಿರುವ ಪ್ರಪಂಚದಲ್ಲಿ ಅತಿ ಮುಖ್ಯವಾದದ್ದು.

ಮೂರನೆಯದಾಗಿ, ನಾವು ವಯೋ - ವಿಂಗಡನಾರೇಖೆಗಳನ್ನು (age-segregation lines) ದಾಟ ತೊಡಗುತ್ತೇವೆ. ನಾವು ವಿದ್ಯಾರ್ಥಿಗಳು ಮತ್ತು ಅಧ್ಯಾಪಕರೊಡನೆ ಸಮುದಾಯದ ಹಿರಿಯತಲೆಗಳನ್ನು ಕಲೆಹಾಕಿ. ಕ್ರಿಯೆಯೊಡನೆ ಮಿಳಿತಗೊಳಿಸುತ್ತೇವೆ. ಆದ್ದರಿಂದ ಇನ್ನು ಮುಂದೆ ವಿದ್ಯಾರ್ಥಿಗಳು ವಯಸ್ಸಿನಿಂದಾಗಿ ವಿಭಜನೆಗೊಂಡ ಪರಿಸರದಲ್ಲಿ ಬೆಳೆಯಬೇಕಾಗುವುದಿಲ್ಲ.

ನಾಲ್ಕನೆಯದಾಗಿ, ನಾವು ವಿದ್ಯಾರ್ಥಿಗಳಿಗೆ, ತಾವು ಸಮಾಜದ ಉತ್ಪಾದಕ (Productive) ಸದಸ್ಯರೆಂಬುವ ಭಾವನೆಯನ್ನು ನೀಡುತ್ತೇವೆ. ಆದರೂ ಮೂರನೆಯ ಅಲೆಯ ಶಿಕ್ಷಣದ ಸಾಧ್ಯವಿರುವ ಬದಲೀ ಮಾದರಿಗಳ (alternate models)ವೈವಿಧ್ಯದಲ್ಲಿ, ಕ್ರಿಯಾತ್ಮಕ ಕಲಿಯುವಿಕೆ ಕೇವಲ ಒಂದು ವಿಧ ಮಾತ್ರ ಅಷ್ಟೇ.

ಇದನ್ನು ಜಾನ್ ಡ್ಯೂಯಿಯ ಸಿದ್ಧಾಂತದಿಂದ ಬೇರೆಯಾಗಿದೆ ಎಂದು ಹೇಗೆ ಪರಿಗಣಿಸುತ್ತೀರಿ ?

ಡ್ಯೂಯಿಯು 'ಇಂದಿನದಕ್ಕೋಸ್ಕರ ಹಳೆಯದನ್ನು ಕಲಿಯಿರಿ' ಎನ್ನುತ್ತಿದ್ದ. ನಾನು ಆ ಮಾತಿಗೆ. 'ಇಂದಿನದಕ್ಕೋಸ್ಕರ ಭವಿಷ್ಯವನ್ನು ಅಧ್ಯಯನ ಮಾಡಿ' ಎಂದು ಸೇರಿಸುತ್ತೇನೆ. ನಾವು ಕಲಿಯಬೇಕಾಗಿರುವುದು ಕೇವಲ ಚರಿತ್ರೆಯಲ್ಲ. ತಮ್ಮ ಹಾಗೂ ಸಮಾಜದ ಬದಲೀ ಭವಿಷ್ಯಗಳನ್ನು (alternate futures) ಕುರಿತು ಯೋಚಿಸ ತೊಡಗುವಂತಹದ್ದು ವಿದ್ಯಾರ್ಥಿಗಳಿಗೆ ನಂಬಲಾರದಂತಹ, ಬೆಲೆಬಾಳುವ ಅನುಭವ. ಡ್ಯೂಯಿ ಅತ್ಯದ್ಭುತನಾದ ವ್ಯಕ್ತಿಯಾಗಿದ್ದ. ಆದರೆ ಆತ ಬೇರೊಂದು ಕಾಲದಲ್ಲಿ ಕೆಲಸ ಮಾಡಿದ. ಆಗ ಸಾಮೂಹಿಕ ಶಿಕ್ಷಣದ ಸೃಷ್ಟಿಯು ಪ್ರಜಾಪ್ರಭುತ್ವದತ್ತ ಒಂದು ಹೆಜ್ಜೆ ಎಂದು ಪರಿಗಣಿಸಲಾಗಿತ್ತು. ಆದರೆ ಇಂದು ಸಾಮೂಹಿಕ ಶಿಕ್ಷಣವನ್ನು ತೊಡೆದು ಹಾಕಬೇಕಾಗಿದೆ.

ಬದಲಾಗುತ್ತಿವೆ ಎಂದು ನೀವು ಯೋಚಿಸುವ ಇನ್ನಾವ ಕೆಲವು ಅಂಶಗಳು ಶಿಕ್ಷಣದಲ್ಲಿವೆ ? ನೀವು ಕ್ರಿಯಾತ್ಮಕ ಕಲಿಯುವಿಕೆಯನ್ನು ಹೆಸರಿಸಿದಿರಿ. ಇನ್ನೇನಿದೆ ?

ಇನ್ನೂ ಮುಖ್ಯವಾದ ಬೆಳವಣಿಗೆಯೊಂದು ಕಂಡು ಬರುತ್ತಿದೆ. ಶಾಲಾವೃತ್ತಿ ಪರಿಣತರು School Professionals) ಅದಕ್ಕೆ ಸಿದ್ಧರಾಗಿದ್ದಾರೋ ಇಲ್ಲವೋ, ಆ ಬದಲಾವಣೆಯಂತೂ ಬಂದೇ ಬರುತ್ತದೆ ಎಂದು ನಾನು ದೃಢವಾಗಿ ನಂಬಿದ್ದೇನೆ. ಕಲಿಯುವಿಕೆಯ ಒಂದು ಗಣನೀಯ ಪ್ರಮಾಣ ಮತ್ತೆ ಮನೆಗೇ ವರ್ಗಾಯಿಸಲ್ಪಡುತ್ತದೆ. ಹೆಚ್ಚು ಹೆಚ್ಚು ಕೆಲಸ ಕೇಂದ್ರಿಕೃತವಾಗಿರುವ ಆಫೀಸುಗಳಿಂದ, ವಿಡಿಯೋಗಳು, ಕಂಪ್ಯೂಟರ್‌ಗಳು, ವರ್ಡ್ ಪ್ರಾಸೆಸರ್‌ಗಳಿಂದ ಸುಸಜ್ಜಿತವಾಗಿರುವ ಮನೆಗಳಿಗೆ ವರ್ಗಾಯಿಸಲ್ಪಟ್ಟಂತೆ, ತಂದೆತಾಯಿಯರು ಇನ್ನೂ ಹೆಚ್ಚಿನ ಶೈಕ್ಷಣಿಕ ಪಾತ್ರವನ್ನು ನಿರ್ವಹಿಸ ತೊಡಗುತ್ತಾರೆ. ಇದು ಅಪರಿಮಿತ ಅನುಮಿತಿಯ ತೊಡಕುಗಳನ್ನು ಹೊಂದಿದೆ.

ಆದರೆ ಈ ಬೆಳವಣಿಗೆಗಳು – ಕ್ರಿಯಾತ್ಮಕ ಕಲಿಯುವಿಕೆ (Action learning) ಮತ್ತು ಮನೆಯಲ್ಲಿ ಕಲಿಯುವಿಕೆ. (Home learning) ಗಳು ವ್ಯಾವಹಾರಿಕ ಆಯಾಮವೊಂದನ್ನು (practical dimension) ಸೇರಿಸುತ್ತವೆ. ಮತ್ತು ಇವೆರಡೂ ವಿದ್ಯಾರ್ಥಿಗೆ ಪಾಲ್ಗೊಳ್ಳುವಿಕೆಯ ಮತ್ತು ಉತ್ಪಾದಕತೆಯ ಭಾವನೆಯನ್ನು ತಂದು ಕೊಡುತ್ತವೆ.

ಬೌದ್ಧಿಕ ವಿಷಯದ (Intellectual Content) ಬಗ್ಗೆ ಏನನ್ನುತ್ತೀರಿ ?

ನಮಗೆ ಮೊದಲು ಯಥಾದೃಷ್ಟಿಯ ಮೂಲಭೂತ ಬದಲಾವಣೆಯೂ ಬೇಕಾಗಿದೆ. ಮೊದಲನೆಯದಾಗಿ, ನಾವು ಏನನ್ನು ಬೋಧಿಸುತ್ತೇವೆಯೋ ಅದಕ್ಕೆ ಮಾನವರು ಜೀವಿಸುವ ಮತ್ತು ತಮ್ಮ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುವ ವಿವಿಧ ಬಗೆಗಳನ್ನು ಹೊಂದಿದ್ದಾರೆ ಎಂಬ ಅರಿವಿನ ಒಂದು 'ಸಂಸ್ಕೃತಿಗಳೋತ್ತರ ಆಯಾಮ' ವನ್ನು (Transcultural dimension) ಪರಿಚಯಿಸಬೇಕು.

ಇವೆಲ್ಲವುದಕ್ಕಿಂತ ಮೇಲಾಗಿ ನಾವು ಭವಿಷ್ಯದ ಯಥಾದೃಷ್ಟಿ (Futures perspeetive) ಮತ್ತು ಒಂದಷ್ಟು ಅಲ್ಪ ಪರಿಮಾಣದಲ್ಲಾದರೂ ಆಶಾವಾದ – ಸಾಧ್ಯವಾದ, ಸಂಭವನೀಯ ಮತ್ತು ಭರವಸೆಕೊಡುವ ಭವಿಷ್ಯದ ಕೆಲವೊಂದು ಕಲ್ಪನೆಯನ್ನು ಒಳತರಬೇಕು.

ಮೂಲ : Span ನವೆಂಬರ್, 1984

"ಈ ಭೂಮಿಯ ಮೇಲೆ ಬದುಕುತ್ತಿರುವ ಪ್ರತಿಯೊಬ್ಬರಿಗೂ ಅಗತ್ಯವಾದದ್ದನ್ನು ಪ್ರಕೃತಿ ಕೊಡಬಲ್ಲುದು; ಆದರೆ ನಮ್ಮ ದುರಾಸೆಗಳನ್ನೆಲ್ಲ ಅದು ಪೂರೈಸಲಾರದು,—ಎಂದಿದ್ದರುಗಾಂಧೀಜಿ ನಮ್ಮ ದುರಾಸೆ—ಅಜಾಗರೂಕತೆಗಳಿಂದ ಈ ದೇಶದ ಪರಿಸರವನ್ನು ಹೇಗೆ ಕೆಡಿಸಿಟ್ಟಿದ್ದೇವೆ ಎಂಬುದನ್ನು ಈಗಲಾದರೂ ನಾವು ನೋಡಿಕೊಳ್ಳಬೇಕು"

(ಭಾರತದ ಪರಿಸರದ ಪರಿಸ್ಥಿತಿ — ಗ್ರಂಥದಿಂದ — ಶಿವರಾಮುಕಾರಂತ)

# ಅಳಿವು

—ಕಾ. ತ. ಚಿಕ್ಕಣ್ಣ

"ಕೋಳ್ಕೂಗೋ ಮುಂದಾದಲ್ಲಿ ನಿಂದೊಳ್ಳೆ ರಾಮಾಯಣಾಯ್ತಪ್ಪ. ಒಳ್ಳೆ ನಿದ್ದೆ ಹೊತ್ನಲ್ಲೇ ನಿಂಗೆ ಕಡ್ಕೊತ್ತದೆ. ಈ ಕೆಟ್ಟ ಚಾಳಿ ತಪ್ಪುಸ್ಕೊಬಾರ್ದ ?"

ರಾಮು ಕಣ್ಣು ಹೊಸಕಂತ್ಲೇ ರೇಗಿದ. ಲಾಡಿ ಸಡಿಲ ಮಾಡೋದಿಕ್ಕೆ ನಿಗಾ ವಹಿಸಿದ್ದ ನರಸ ಆಹೂ ಅನ್ನಲಿಲ್ಲ. ಕತ್ತಲೆಯಲ್ಲಿ ಕಾಲು ಬೇರೆ ಎಡವಿತ್ತು. ರಾಮು ಇನ್ನಷ್ಟು ಸಿಡುಕಿನಲ್ಲಿ "ನ್ಯಾಯ್ದ – ಮುರದಂಡಿ ಕೂತ್ಕೊಂಡೇ ಹೋಗು" ಅಂತೇಳಿ ತಾನು ಹಾದಿಬದಿ ಮೈನೀರು ಹುಯ್ಯಾ ಕೂತ.

ನರಸ ನಾಕೈದು ದಿನದಿಂದ ಇಷ್ಟೊತ್ತಿಗೆ ಏಳಿಸೋದಿಕ್ಕೆ ಪಾಟಾಗಿದ್ದ. ದಿನಾ ಯೇನು ಏಳಿಸೋದು ರವಷ್ಟು ಮಬ್ಬು ಹರಿದುಬುಡಲಿ ಅಂತ ಹೆಣಗಾಡಿದ್ದರೂ ಕೊನೆಗೆ ತಡೆಯೋದಿಕ್ಕೆ ಆಗಿರಲಿಲ್ಲ. ಹಂಗಾಗಿ ರಾಮು ಏನಂದರೂ ಮನಸ್ಸಿಗೆ ಹಾಕಿಕೊಳ್ಳದೆ ಚಡ್ಡಿ ಊರಿ ಕಬಕ್ಕನೆ ಕೂತ್ಕೊಂಡ. ಒಳಗಿನ ಒತ್ತಡ ಕಡಿಮೆಯಾದಂತೆ ದೇಹ ಹಗುರವಾಗತೊಡಗಿತು.

ಇನ್ನೂ ಪೂರ್ತಿ ಹೋಗಿರಲಿಲ್ಲವೇನೊ. ಮೇಲಿಂದ ಏನೋ ಮುಂದಲೆ ಮೇಲೆ ಉದುರಿದಂತಾಯ್ತು. ಬೆಚ್ಚಿದ. ಹಾದಿ ಬದಿಯಲ್ಲೇ ಕೂತಿದ್ದ ರಾಮುನ ಇನ್ನೊಂದು ಸಲ ನೋಡಿ ವಸಿ ಧೈರ್ಯ ತಕೊಂಡು ಥುತ್ ಇದರೌವ್ವನ ಅಂತ ಒರೆಸಿಕೊಂಡ. ಕೆಟ್ಟ ವಾಸನೆ. "ಏನು ಹಕ್ಕಿ ಹೇಲ್ತೋ" ಹೆಂಗೆ ಅಂತ ಅಂಜಿಕೊಂಡೇ ಮೆಲ್ಲಗೆ, ಕತ್ತೆತ್ತಿ ನೋಡಿದ ; ಅಷ್ಟೆ.

ಅಯ್ಯಯ್ಯಪ್ಪೋ ಅಂತ ಅಬ್ಬರಿಸಿದ್ದು ಅಷ್ಟು ದೂರದಲ್ಲಿ ಮೈನೀರು ಹುಯ್ಯುತ್ತಿದ್ದ ರಾಮುನಿಗೆ ಎತ್ತಿ ಕುಕ್ಕಿರಿಸಿದಂತಾಯ್ತು. ದಡಕ್ಕನೆದ್ದ. ಕಿರಿಚಿದ್ದು ನಾಕು ಕಡೀಂದಲೂ ಮೊಗಚಿಕೊಂಡಂಗಾಯ್ತು. ಅವನಿಗೆ ಏನೂ ಕಾಣಿಸಲಿಲ್ಲ. ತೊಳ್ಳೆ

---

ಕಾ.ತ. ಚಿಕ್ಕಣ್ಣ, ನಂ. ಎ-85/1, ಜೀವನಬೀಮಾನಗರ, ಬೆಂಗಳೂರು-560 075

ಗಡಗಡನೆ ನಡುಂಗಿದೊ. ಜೀವಭಯದಿಂದ ಬೊಬ್ಬೆ ಹೊಡಕೊಂಡು ಒಂದೇ ನೆಗೆತಕ್ಕೆ ಹಾರಿದ.

ನ್ಯಾಯ್ದುವರದಿಂದ ಎಂಟ್ಟತ್ತ್ತು ಊಳೊ ಹಗ್ಗದ ದೂರದ ಸ್ಕೂಲ ಜಗಲಿ ಮೇಲೆ ಮಲಗಿದ್ದ ರಂಗನಿಗೆ ಆ ಸದ್ದು ಕಪಾಳಕ್ಕೆ ಅಪ್ಪಳಿಸಿದಂತಾಯ್ತು. ಎದ್ದವನೇ ಪಕ್ಕದಲ್ಲಿ ಮಲಗಿದ್ದ ಸಣ್ಣನ ಪಕ್ಕೆ ಮುರಿಯುಂಗೆ ತಿವಿದು ಅಬ್ಬರಿಸಿದ. ಸಣ್ಣ ಗಬರಾಡುತ್ತ ಎದ್ದ. ಅವನು ಏ ... ... ಏನು ಅನ್ನೋವಷ್ಟರಲ್ಲಿ ರಂಗ ಬೀದಿಗೆ ನೆಗೆದಿದ್ದ. ಸಣ್ಣ ತನ್ನ ಪಕ್ಕದಲ್ಲಿ ಮಲಗಿದ್ದ ಕಂದಕುಟ್ರ ಏಳಿಸೋದಿಕ್ಕೆ ತಡವರಿಸಿದ. ಸಿಗಲಿಲ್ಲ. ಈ ಕಡೆ ಮಲಗಿದ್ದ ರಾಮು ನರಸರೂ ಕೈಗೆ ಸಿಗಲಿಲ್ಲ. ತಲೆದಸಿಯೇ ಇಟ್ಟುಕೊಂಡಿದ್ದ ಬೆಂಕಿಕಡ್ಡಿ ಗೀರಿ ನೋಡಿದ. ಜೊತೇಲಿ ಮಲಗಿದ್ದ ಒಬ್ಬರೂ ಕಾಣ ಲಿಲ್ಲ. ಹೊದಪೆಲ್ಲ ಚೆಲ್ಲಾಪಿಲ್ಲಿಯಾಗಿದ್ದೊ. ಟಪ್ಪನೆ ಬೆಂಕಿಕಡ್ಡಿ ಎಸೆದು ಅವನೂ ಬೀದಿಯುತ್ತ ಹಾರಿದ.

ಈಗ ಊರೊಳಗೆ ಮುವ್ವರೂ ಬೆದರಿದ ಎತ್ತಿನಂಗೆ ಒಬ್ಬರ ಹಿಂದೆ ಒಬ್ಬರು. ಶೆಕೆ ಅಂತ ಬೀದಿಯಲ್ಲೇ ಮಲಗಿದ ಹನುಮಪ್ಪ. ರಾಮನ ಕಾಲಿಗೆ ಸಿಕ್ಕಿ ಸತ್ತನಲ್ರೋ ಅಂತ ಕಿರಿಚಿಕೊಂಡೇ ಎದ್ದ. ಕಿರಿಚಾಟ ಊರು ಬೀದಿಯೊಳಗೆ ಮೊಗಚಿಕೊಂಡಿತು. ಒಳ್ಳೆ ನಿದ್ದೆ ಹೊತ್ತಿನಲ್ಲಿ ಅರ್ಧಂಬರ್ಧ ಕಣ್ಣುಬಿಟ್ಟು ಗಾಬರಿಯಿಂದ ಎದ್ದು ಹೊರ ಚೆಲ್ಲಿದ ಜನ ಸಣ್ಣನ ಹಿಡಕೊಂಡು "ಏನು ಏನು" ಅಂತ ಕೇಳಿದರು. "ರಂಗ...ರಂಗ... ಅಂತ ಅವನು ಬೊಬ್ಬೆಹೊಡೆದ. ಭಯದಿಂದ ತಮ್ಮ ಮನೆ ಕಡೆ ಓಡುತ್ತಿದ್ದ ರಂಗನ ಹಿಡಿದು ಕೇಳಲಾಗಿ ಅವನು "ರಾಮು... ರಾಮು... ರಾಮು" ಅಂತ ಹೊಡಕೊಳ್ಳುತ್ತಿದ್ದ ಎದೆ ಹಿಡಕೊಂಡ. ಜನದ ಕಾಲಸಂದಿ ಸಿಕ್ಕಿ ನರಳುತ್ತಿದ್ದ ರಾಮನ ಹುಡುಕಿ ಎತ್ತಿ ಕೂರಿಸಿ ಕೇಳಲಾಗಿ ಅವನು ಉಸಿರೇ ಬುಡಲೊಲ್ಲ. ನಿಧಾನಕ್ಕೆ ನೀರು ತರಿಸಿಕೊಂಡು ಕುಡಿದು ಸುಧಾರಿಸಿದ ಮೇಲೆ ನರಸನ ನೆನಪು ಮಾಡಿಕೊಂಡು "... ಕೂತಿದ್ದೋನು ಸಿಡ್ಲು ಹೊಡೆದಂಗೆ ಕಿರಿಚ್ಕೊಂಡ. ಏನು ಎತ್ತ ಒಂದೂ ತಿಳೀನಿಲ್ಲ. ನನ್ನ ಹಿಂದ ಡಿಂದ ಏನೋ ಅಟ್ಕೊಂಡು ಬಂದಂಗಾಯ್ತು. ನಾನು ಒಂದೇ ನೆಗತಕ್ಕೆ ಊರು ಬಿದ್ದು ಬುಟ್ಟೆ ... ಅಂದು ತಿರಂಗ ನೀರು ಕುಡಿದ.

ಒಳ್ಳೆ ಕುರಿ ತಿಂದ ತೋಳನಂಗೆ ಊರೊಳಗೆ ಅಡ್ಡಾಡಿಕೊಂಡಿದ್ದ ಈ ಹೈಕಳ ಈ ಬಗೆಯ ಗಾಬರಿ ಭೀತಿ ಕಂಡು ಜನರಿಗೆ ಇದೊಂಥರ ಒಗಟಾಯ್ತು. ಏನೋ ಮಾಡ್ಕೊಂಡಿರಬೇಕು ಅನ್ನೋ ಅನುಮಾನವೂ ಆಯ್ತು. ಹಂಗಾದ್ರೆ ಆ ನರಸ ಎಲ್ಲಿ? ಇವರ ಜೊತೆಯೇ ಮಲಗುತ್ತಿದ್ದ ಕಂದಕುಟ್ರು ಎಲ್ಲಿ ?

ಒಬ್ಬ ಕೇಳಿದ : "ಎಂಡಕ್ಕೆ ಎಲ್ಗೆ ಕಳಿಸ್ದೆ ನರಸನ" ?

ರಾಮು ಭೀತಿಯಿಂದ ಅವನ ಮೋರೇನೇ ನೋಡುತ್ತಾ "ನ್ಯಾಯದ್ದ ಮರದಂಡಿಗೆ" ಅಂದ. ಬೆಂಕಿಕೊಳ್ಳಿ ಪಳ್ಳಿ ಹಿಡಿದ ಜನ 'ಮೊದ್ಲು ಅಲ್ಲಿ ನೋಡಾನೆ ಬಲ್ರಿ' ಅಂದ್ಕೊಂಡು ಅತ್ತ ನಡೆದರು.

ನರಸ ಗ್ನ್ಯಾನ ತಪ್ಪಿ ಬಿದ್ದಿದ್ದ. ಚಡ್ಡಿ ಕಾಲ್ಕೆಳಗಿತ್ತು. ಮುಕದಲ್ಲಿ ಭೀತಿ ಅಚ್ಚೊತ್ತಿ ನಿಂತಿತ್ತು. ತಟಕ್ಕನೆ ಯಾರೊ ಒಬ್ಬ "ಅಯ್ಯಯ್ಯಪ್ಪೋ ಅಲ್ಲಿ ನೋಡ್ರೋ" ಎಂದು ಕಿರಿಚಿಕೊಂಡ. ಎಲ್ಲರ ಕಣ್ಣು ಅತ್ತ ಸರಿದವು. ನ್ಯಾಯದ್ದ ಮರದ ಮೋಟು ಕೊಂಬೆ ಯಿಂದ ಶವ ನೇತಾಡುತ್ತಿತ್ತು !

o — — o

ನೀರ್‍ಹೊಳೆ ದಾರಿಯ ಊರ ಮುಂದಾರದಲ್ಲೇ ನ್ಯಾಯದ್ದ ಮರ. ಊರಿನ ನಾಕೈದು ತಲೆಮಾರ ಕಂಡ ಮರವಂತೆ ಇದು. ಪೂಜಾರಿ ಕಾಳಪ್ಪನ ಜಮಾನದಲ್ಲಿ ಸಾಲಕೊಡೋರಿಗೆ ಸಾಲ ತಕೊಳ್ಳೋರಿಗೆ ಸಾಕ್ಷಿಗಾಗಿ ನಟ್ಟು ಬೆಳೆಸಿದ್ದಂತೆ. ಅಗ ನ್ಯಾಯದ ಕಟ್ಟೆಯೂ ಇದೇ ಆಗಿತ್ತಂತೆ. ಈಗ ನ್ಯಾಯದ್ದಮರ ಅನ್ನೋ ಹೆಸರು ಬಿಟ್ಟರೆ ಬೇರೇನೂ ಉಳಿದಿಲ್ಲ, ತೋಳು ಕತ್ತರಿಸಿದ ಮುಂಡದಂಗೆ ಕಾಣ್ತದೆ. ನಾಯಿ ನರಿ ನರಸ ನಾರಾಣಯಣನಂಥೋರ ಮೈಬಾಧೆ ತೀರಿಸಿಕೊಳ್ಳುವ ಹಾಳು ಗುಂಡಿಯೂ ಆಗಿದೆ.

ಈ ನ್ಯಾಯದ್ದಮರದ ಸುತ್ತ ಬಹಳ ಕಾಲದ ಮೇಲೆ ಊರಿನ ಜನ ಮೊಗಚಿ ಕೊಂಡಿದ್ದರು. ಒಂದಲ್ಲ ಒಂದು ರೀತಿಯಲ್ಲಿ ಎಲ್ಲರ ಮನಸ್ಸಿನ ಮೇಲೂ ಪರಿಣಾಮ ಬೀರಿದ್ದ ಕಂದಕುಟ್ರ ನೇಣುಹಾಕಿಕೊಂಡು ಸತ್ತದ್ದು ಅವರಿಗೆ ಉಸಿರು ಕಟ್ಟಿಸಿತ್ತು. ಹೊಲದ ಕಡೆ ಹೋಗೋರು, ಕೆರೆ ಕಡೆ ಹೋಗೋರು. ನಿಂಗಪ್ಪನ ಹೋಟಲಿಗೆ ಹೋಗೋರು ಅಲ್ಲಲ್ಲೇ ನಿಂತು ಇನ್ನೊಬ್ಬರ ಮುಕದಲ್ಲಿ ಏನೇನೋ ಹುಡುಕೋದಿಕ್ಕೆ ಯತ್ನಿಸುತ್ತಾ ಗಲಿಬಿಲಿಗೊಂಡಿದ್ದರು. ಮೂರು ಮೈಲಿಯ ಪುರದಿಂದ ಪೊಲೀಸಿನವರು ಬರೋವರೆಗೂ ಮರದಂಡಿಯ ಹಾತಾಟ ನಡೆದೇ ಇತ್ತು.

ಕಂದಕುಟ್ರ ಶವ ಗಾಳಿಗೆ ಅತ್ತಿತ್ತ ಒಲಿದಾಡುತ್ತಿತ್ತು. ನಾಲಿಗೆ ಚಾಚಿ, ಕತ್ತು ಒರಗಿತ್ತು. ಬಾಯಿಂದ ರಕ್ತ, ನೊರೆ ಹೊರಚೆಲ್ಲಿತ್ತು. ಕೈ ಕಾಲು ನಿಗಿರಿದ್ದಾ. ಸಾಯಲೇಬೇಕು ಅನ್ನೋ ಗಟ್ಟಿ ನಿರ್ಧಾರಕ್ಕೆ ಬರೊ ಮೊದಲೆಯೋ ಅಥವಾ ಹಗ ಸುತ್ತಿ ನೆಗೆದಾಗ ಕುತ್ತಿಗೆ ಗಂಟು ಸರಿಯಾಗಿ ಬೀಳದೆ ವಿಳಂಬದಿಂದಾಗಿ ಸಾವಿನ ಹಿಂಸೆಯ ತಡೆಯೋದಿಕ್ಕೆ ಆಗದೆಯೋ ಕಡಕೊಂಡಿದ್ದ ಮಲಮೂತ್ರವೆಲ್ಲ ತೊಡೆ ಮೇಲೆ ಸೋರಿ ಮರದಂಡಿಯೂ ಚೆಲ್ಲಾಡಿತ್ತು.

ಎಲ್ಲವನ್ನು ಗಮನಿಸಿದ ಇನ್‌ಸ್ಪೆಕ್ಟರು ಇನ್ನಿಬ್ಬರು ಪೊಲೀಸಿನವರಿಗೆ ಏನೊ ಸೂಚನೆ ಕೊಟ್ಟು, ತಾವು ಕೂಡಳ್ಳಿ ಛೇರ್ಮನ್ರ ವಿಚಾರಿಸುತ್ತ ಸ್ಕೂಲ ಜಗಲಿಗೆ ಬಂದರು.

ನರಸನ ತಿಕತೊಳೆದು, ಚಡ್ಡಿಕಟ್ಟಿ, ಗಾಳಿ ಬೀಸ್ತಾ ಪೊಲೀಸ್ನೋರು ಬರೋಗಂಟಲೂ ರಾಗ ಹಾಡುತ್ತಾ ಇದ್ದ ಅವನ ಅವ್ವ ಈಗ ಗಂಟಲು ದೊಡ್ಡದು ಮಾಡಿದ್ದಳು. ಎಲ್ಲಿ ಇವರು ನನ್‌ಮಗನ ಹಿಡ್ಕೊಂಡು ಇಜಾ ಕೊಡ್ತಾರೋ ಅನ್ನೋದು ಅವಳ ಆತಂಕ. ಆ ಭಯಲ್ಲೇ "ಮೊದ್ಲಿಂದ್ಲೂ ಬಡ್ಕೊಂಡೆ ಬಡ್ವಾ ನೀ ಮುಡಿಗ್ದಂಗಿರು ಯಾರ ಸವಾಸ್ವೂ ಬ್ಯಾಡ ಅಂಥ ಕೇಳ್ದಾ ? .... ಅಂತ ನೀತಿನೂ ಹೇಳುತ್ತಿದ್ದಳು. ಅಷ್ಟೊತ್ತಿಗೆ ಕರಿಜವ್ರ ಬಂದು "ಲೋ ನರ್ಸ ಪೊಲೀಸ್ನೋರು ಕರೀತ ನಿನ್ನ" ಅಂದ. ನರಸನಿಗೆ ಗಂಟಲು ಆರಿತ್ತು. ಅವನ ಅವ್ವನಿಗೆ ಫಜೀತಿಗೆ ಇಟ್ಟುಕೊಂಡಿತ್ತು. "ನೋಡು ಇಸ್ಕೂಲ ಜಗ್ಲಿ ಮ್ಯಾಲವ್ರೆ ಬರ್ಬೇಕಂತೆ" – ಕರಿಜವ್ರ ಒಳ್ಳೆ ಯಮಧೂತನಂಗೆ ನಿಂತಿದ್ದ. ಈಗ ಹೌಹಾರಿದ್ರೆ ಏನೋ ಎಂಥೋ ಅಂಥ ಧೈರ್ಯ ತಂದುಕೊಂಡು ನರಸನ ಅವ್ವ "ಇಲ್ಲಿ ನನ್ ಮಗ ರಾವು ಹಿಡಿದು ಕುಂತದೆ ಇನ್ನೊಂದು ರಾವು ತೆಗೆಯಕ್ಕಾ ? ಅಂಥದ್ದೇನೂ ಇವ್ನು ಮಾಡಿಲ್ಕಂತೆ ಹೋಗು" ಅಂತ ಹೇಳಿದಳು. ಕರಿಜವ್ರ ನಂಗ್ಯಾಕೆ ಬೇಕು ಅಂಥ ಹೋಗಿ ವರದಿ ಒಪ್ಪಿಸಿದ. ಇನ್‌ಸ್ಪೆಕ್ಟರ ಕಣ್ಣು ಕೆಂಪಗಾಯ್ತು. ಒಬ್ಬ ಪೊಲೀಸ್ನೋನೇ ಬಂದು ಅವನ ಅವ್ವ ಅರಚಾಡಿದ್ರೂ ಬಿಡದೆ ಗದರಿಸಿ, ನರಸನ ಕರಕೊಂಡು ಹೋದ.

ನರಸ ಭೀತಿ ತೆಗೆದಂಗೆ ಕಾಣುತ್ತಿದ್ದ. ಇನ್‌ಸ್ಪೆಕ್ಟರು ತನ್ನ ದುರುಗುಟ್ಟಿಕೊಂಡು ನೋಡಿದ್ದನ್ನೇ ಸಹಿಸೋದಿಕ್ಕೆ ಆಗದೆ ಕುಸಿದ. ಅವರು ಏನೂ ಕೇಳಿದ್ರೂ ನಾಲಿಗೇ ಹೊರಳಲಿಲ್ಲ.

ಕಂದಕಂಟ್ರ ಅವ್ವನ ರಾಗವೂ ಏರುತ್ತ ಇಳಿತ್ತಿತ್ತು. "ಈ ಮನೆಹಾಳು ನನ್ ಮಕ್ಳೇ ನನ್ನ ಮಗುನ್ನ ಕೊಂದ್ರೋ" ಅಂತ ನಂಜಪ್ಪನ ಮನೆಯೋರ ಬೈಯೋಳು. "ಈ ಅಪಾಪೋಲ್ಗೋಳು ನನ್ನ ಮಗುನ್ನ ಹಾಳ್‌ಮಾಡಿದ್ರೋ" ಅಂತ ಮಗನ ಎಡಗೈ ಬಲಗೈ ಆಗಿದ್ದ ನರಸ, ರಂಗ ರಾಮ, ಸಣ್ಣರ ಹಾಡಿ ಹೊಗಳಿ ಎದೆ ಬಡಕೊಳ್ಳುವಳು. ಮಾಜಿ ನಂಬ್ರು ನರಸಿಂಹೇಗೌಡ ಬಾಯಿ ಮುಚ್ಚುವಂತೆ ಗದರಿಸಿದರೂ ಆಗಿರಲಿಲ್ಲ.

"ಅವಳು ಯಾರು ಅವನ ಅವ್ವನೋ" ಇನ್‌ಸ್ಪೆಕ್ಟರು ಪಕ್ಕದಲ್ಲೇ ಕೂತಿದ್ದ ಕೂಡಳ್ಳಿ ಛೇರ್ಮನ್ರ ಕೇಳಿದರು. ಅವರು ಕತ್ತಾಡಿಸಿದರು. "ಯಾರ್ಯಾರೆದ್ದೊ ಹೆಸರೆತ್ತಿ ಹೇಳ್ತಾ ಅವಳೆ, ನೀವ್ ನೋಡಿದ್ರೆ ಸೂಯಿಸೈಡ್ ಕೇಸಂತೀರಿ ಏನ್ರಿ ಇದು ? " ಛೇರ್ಮನ್ರ ಬೆದಕಿ ಕೇಳಿದರು. ಛೇರ್ಮನ್ರು ಹತ್ತಿರ ಸರಿದು - "ಸೂಯಿಸೈಡ್ ಕೇಸಂತು ನಿಜ ಸೋಮಿ, ಆದ್ರೂ ಅವ್ರನ್ನೂ ಕರ್ಸಿ ಇಚಾರಿಸದೆ ಅದ್ಯೇನಂತೆ ಅಂತ ವಿನಯ ಮಾಡಿದರು.

ಭೀರ್ಮೈನ್ರ ಮಾತಿನಲ್ಲಿ ವಿಶ್ವಾಸ ಕಾಣದೆ ಹೋದ ಇನ್‌ಸ್ಪೆಕ್ಟರು ಅಸಹನೆಯಿಂದ "ಈ ಹುಡುಗನ ಜೊತೆ ಯಾರ್‍ಯಾರು ಓಡಾಡ್ತಾ ಇದ್ರಯ್ಯಾ ?" ಎಂದು ಎದುರಿಗೇ ದೊಣ್ಣೆ ಊರಿಕೊಂಡು ನಿಂತಿದ್ದ ಸಣ್ಣಂಗನ ಕೇಳಿದರು. ಅವನು ಇಲ್ಲಿಗೆ ಬಂದದ್ದೇ ಮಹಾಪರಾಧವಾದಂಗೆ ಅನಿಸಿ ಒದ್ದಾಡುತ್ತಿದ್ದ ಕಂಡು "ಹಿಂಗ್ಯಾಕೆ ಸಾಯ್ತೀರಿ ಕೇಳಿದ್ಕೆ ಉತ್ರ ಕೊಡಿ ನಿಮ್ಮುನ್ನೇನು ಕತ್ರಿಸಿ ಉತ್ರಿಸೋದಿಲ್ಲ" ಅಂತ ರೇಗಿದರು. ಇನ್‌ಸ್ಪೆಕ್ಟರು ರೇಗಿದ್ದ ಕಂಡು ಭೀರ್ಮೈನ್ರು ತಾವೇ "ಇವನು ಈ ನರಸ ಆ ರಾಮು, ಸಣ್ಣ, ಮುಕರ್ಜಾಳಿ, ರಂಗ, ಪುಟ್ಟ, ಕರೀಗೌಡ, ಆ ದೊಡ್ಡಟ್ಟಿ ಕೆಂಪನಮಗ ಏನವನ ಹೆಸ್ರು ?" ಅಂತ ಪಟ್ಟಿ ಮಾಡುತ್ತಾ ಜನದ ಕಡೆ ತಿರುಗಿದರು.

ಅಲ್ಲೇ ನಿಂತಿದ್ದ ಕೆಂಪ ಬೆಚ್ಚಿದಂಗಾದ್ರೂ ಅದನ್ನ ತೋರ್ಪಡಿಸದೆ "ನಿಮ್ಮೂರ ದ್ಯಾವಪ್ಪನ ರಾಗಿ ಮೆದೆ ಸುಟ್ಟ ಮ್ಯಾಲೆ ನನ್ಮಗ ಇವ್ರ ಕಡೀಕೆ ತಲೆ ಹಾಕ್ಯೂ ಮಲಗ್ತಿರ್ನಿಲ್ಲ ಭೀರ್ಮೇನ್ರೇ, ಅವನ ಹೆಸುರ್ನ ಇಲ್ಯಾಕೆ ತತ್ತೀರಿ ?" ಅಂದ ವಸಿ ಧೈರ್ಯವಹಿಸಿ·

ಭೀರ್ಮೈನ್ರು "ಹೂ ಹೌದೌದು, ಕೆಂಪನ ಮಂಗನಿಂದ್ಲೇ ತಾನೆ ಅದು ಹೊರ ಬಿದ್ದದ್ದು. ಅದು ನಿವರ್ಗೂ ಗೊತ್ತಲ್ಲ ? ಆ ಹೈದೇನು ಇವರ ಸಂಘ ತುಳಿದಂಗೆ ಇಲ್ಲ ಸೋಮಿ" ಅಂತ ಹಲ್ಲುಗಿರಿದು ಇನ್‌ಸ್ಪೆಕ್ಟರ ಮಂಕನೋಡಿದರು. ಅವರಿಗೆ ಎಲ್ಲಕ್ಕೂ ಯಾಕೊ ಈ ಭೀರ್ಮೈನ್ರೇ ಅಡ್ಡಿ ಬರೋಹಂಗೆ ಅನ್ನಿಸಿ "ಅವ್ರರ್ನೆಲ್ಲ ಕರುಸಿ ಬೇಗ" ಅಂತ ಸಿಡುಕಿದರು.

ಭೀರ್ಮೈನ್ರು ಎದ್ದು ಬೆದರನ ಕರೆದು "ನೋಡ್ಲಾ, ಹೋಗಿ ಆ ರಾಮು, ಸಣ್ಣ, ರಂಗ, ಮುಕರ್ಜಾಳಿ, ಪುಟ್ಟ, ಕರೀಗೌಡ, ನರಸ ಓ ಇಲ್ಲೆ ಅವನೆ ಇವನ ಬುಡು ಮತ್ತೆ ಆ ನಂಜಪ್ಪನ ಈಗ್ಲೇ ಕರ್ಕೊಂಡು ಬರೋಗು ಅಂ .... " ಜೋರು ಮಾಡಿದರು,

ಎಪ್ಪತ್ತೆಂಬ್ಬತ್ತು ಒಕ್ಕಲಿರೊ ಊರೊಳಗೆ ಹೋಗಿ ಗಬರಾಡಿ ಬಂದ ಬೆದರ "ನಂಜಪ್ಪ ಬತ್ತಾ ಅವ್ರೆ ಉಳಿದೋರ್‍ಯಾರೂ ಮನೇಲಿಲ್ಲ ಬುದ್ಧಿ," ಅಂತ ವರದಿ ಒಪ್ಪಿಸಿದ.

ಇನ್‌ಸ್ಪೆಕ್ಟರ ಪಿತ್ತ ಕೆರಳಿತು. "ಕೇಳಿದ್ಕೆ ಸರ್‍ಯಾಗಿ ಹೇಳ್ದೆ ಇದ್ರೆ ಒಕ್ಕಡಿಂದ ಊರ್ನೋರ್ನೆಲ್ಲ ಹೊಡ್ಕ್ಯಂಡು ತಕೊಂಡು ಹೋಗ್ಬೇಕಾಗ್ತದೆ ನೋಡಿ" ಎಂದು ದೊಣ್ಣೆ ಕುಣಿಸಿ, ಕೂತಿದ್ದ ನರಸನ ಬಳಿಗೆ ಬಂದು ದೊಣ್ಣೆಯಿಂದ ಮೂತಿ ಎತ್ತಿ "ಭೊಗಳೊ ಭೋಳಿ ಮಗನೆ ಏನು ನಡೀತು ಅಂತ" ಅಂದರು. ನರಸನ ಚೆಡ್ಡಿ ಒದ್ದೆಯಾಯ್ತು. ನಾನು ಯಾಕೆ ಸಾಯ್ದೆ ಹೋದೆ ಅಂತ ಅನಿಸಿ ಬಿದ್ದು ಹೊರಳಾಡಿದ. "ನಂಗೊತ್ತಿಲ್ಲ ಬುದ್ಧಿ" ಅಂತ ಗೋಗರೆದ.

ಇನ್‌ಸ್ಪೆಕ್ಟರಿಗೆ ತಮ್ಮ ಸಿಟ್ಟಾಕೆಲೊ ಮಿತಿಮೀರಿತು ಅನಿಸಿ ಹಿಂತಿರುಗಿ ಬಂದು "ಹೇಳ್ರಯ್ಯ ಎಲ್ಲಿ ಅವರೆಲ್ಲ" — ಕಣ್ಣು ಮೆಡರಿಸಿದರು.

ಒಬ್ಬ "ಬೆಳಕಾಗೋಗಂಟ ಎಲ್ರೂ ಇದ್ರು ಸೋಮಿ. ನಿಮ್ಮ ಜೀಪು ಕಂಡ ಮ್ಯಾಲೆ ಹೆದುರ್‍ಕೊಂಡೇನೋ ಹೋಗಿರ್‍ಬೇಕು" ಅಂದ.

ಭೇರ್‍ಮನ್ರು "ಬಾಯಿಂಲ್ಲಿ ಮುಂದ್ಕೆ, ಎಲ್ಲಿಗೆ ಹೋದ್ರು ಅಂತ ಸಾಹೇಬ್ರು ಮುಂದು ಒದ್ರು" ಅಂದರು. ಅವನ ಉಸಿರು ಮತ್ತೆ ಅಡಗೇ ಹೋಯ್ತು. ನಂಗ್ಯಾಕೆಬೇಕು ಅಂದುಕೊಂಡೋನಂ ಗುಂಪೊಳಗೆ ಮಂಗಮಾಯವಾದ.

೦ — ೦

ಭೇರ್‍ಮನ್ರು ಇನ್‌ಸ್ಪೆಕ್ಟರ ಮುಂದೆ ಹೆಸರಿಸಿದ್ದ ಎಲ್ಲರೂ ನಿಂಗ್ರಾಜ ಕಂದಕಂಟ್ರಾಗಿ ಬಂದ ಮೇಲೆ ಎಡಗೈ ಬಲಗೈಯಾಗಿದ್ದವರು. ಮನೆಯಲ್ಲಿ ಜಗಳ ತೆಗೆದು ಎರಡು ವರ್ಷ ಮಾಯವಾಗಿ ಹೋಗಿದ್ದ ನಿಂಗ್ರಾಜ ಒಂದು ದಿನ ಇದಕ್ಕಿದ್ದಂಗೆ ಪ್ರತ್ಯಕ್ಷ ವಾಗಿದ್ದ. ಅದೂ ಹೆಂಗೆ ? ಕಾಕಿ ಪ್ಯಾಂಟು ಕಾಕಿ ಶರ್ಟು ಹಾಕಿಕೊಂಡು ಕೈಗೊಂದು ವಾಚು ಕಟ್ಟಿಕೊಂಡು ಮುಖದಲ್ಲಿ ಮಹಾರಾಜರ ಕಳೆ ಹೊತ್ತು ನೋಡೋರ ಕಣ್ಣು ಕುಕ್ಕುವಂತೆ ಬಂದಿದ್ದ. ಅವ್ವ ಓಡಿ ಬಂದು ತಬ್ಬಿಕೊಂಡಿದ್ದಳು. ಅಪ್ಪ ಮೊದ ಮೊದಲು ಸಿಟ್ಟೇ ತೋರಿಸಿದ್ದ. ಅಣ್ಣ ಅತ್ತಿಗೆ ಖುಷಿಗೊಂಡಿದ್ದರು. ಊರಿನೋರು ಪೋಲಿ ಬಿದ್ದಿದ್ದ ಹೈದ ಹೋಗಿ ನೌಕರಿ ಗಿಟ್ಟಿಸ್ಕೊಂಡು ಬಂದದ್ದು ಕಂಡು ಹುಬ್ಬು ಏರಿಸಿದ್ದರು. ಅವನಂಗೆಯೇ ಹಣಗಾಡಿ ಆದರೂ ಮೇಲೇರಲಾಗದಿದ್ದ ಅವನ ಸದರಿ ಯೋರಿಗೆ ಕಂದಕುಟ್ರ ನೋಡಂಗಿಲ್ಲ ; ಬಿಡೋಹಂಗಿಲ್ಲ.

ಕಂದಕುಟ್ರು ಮೂರು ದಿನ ಇದ್ದು ಮತ್ತೆ ಹೋಗಿದ್ದ. ಆಮೇಲೆ ತಿಂಗಳಿ ಗೆರಡು ಸಲ ಬರಲು ಸುರುಮಾಡಿದ. ತಮ್ಮ ಹಳೆ ಮನೆಗೆ ಗಾರೆ ಹಾಕಿಸಿದ ಹೊಸದಾಗಿ ಜಗಲಿ ಮೇಲೊಂದು ರೂಮು ಕಟ್ಟಿಸಿದ. ಎರಡು ಫರ್ಲಾಂಗಿನಿಂದ ವೈರು ಎಳೆಸಿ ತನ್ನ ಮನೆಗೆ ಲೈಟು ಹಾಕಿಸಿದ. ರೇಡಿಯೊ ತಂದ. ಮನೆಯೋರಿಗೆ ಬಿಟ್ಟಿರಲಾಗದ ಮಗನಾದ. ಕೆಲಸ ಇಲ್ಲದೆ ಕೂತಿದ್ದ ಪಡ್ಡೆ ಹೈಕಳ ಪ್ರಾಣವಾದ. ಇಷ್ಟೆಲ್ಲ ಅನಾಯಾಸ ಬೆಂಬಲ ಹೊಂದಿದ ಕಂದಕುಟ್ರ ಕೈ ಮತ್ತು ಬಾಯಿ ಕಡುಪಾ ದರೂ ಹಣದ ಕುಳವಾದ್ದರಿಂದ ಊರಿನವರೂ ಸಹಿಸಿಕೊಂಡು ಅನುಕೂಲ ಪಡೆಯು ತ್ತಿದ್ದರು.

ಇನ್ನೂ ಸ್ವಲ್ಪ ಸಮಯ ಕಳೆಯಿತು. ಪುಟ್ಟನ ಕೆಲ್ಸಕ್ಕೆ ಸೇರಿಸ್ತೀನಿ ಅಂತ ಪೇಟೆಗೆ ಕರಕೊಂಡು ಹೋದಿ ತಾನೇ ನಡೆಸುತ್ತಿದ್ದ ಬಿಯರ್‌ನ ಅಂಗಡಿಗೆ ಬಿಟ್ಟ.

ಪೇಟೆ ಹುಡುಗಿ ತಂದು ನನ್ನ ಹೆಂಡ್ತಿ ಅಂತ ರೂಮಿನಲ್ಲಿ ಇಟ್ಕೊಂಡ. ಅಪ್ಪ ಅವ್ವರ ಬಾಯಿ ಕಟ್ಟಿತು, ಗೆಳೆಯರ ಹುಬ್ಬು ಹಾರಿತು. ಆದರೂ ಕಂದಕಂಟ್ರ ಪ್ರಭಾವ ಊರಲ್ಲಿ ಬಹುಬೇಗ ಬೆಳೆದಿದ್ದರಿಂದ ಅದೂ ನ್ಯಾಯಂದ ವಿಷಯವಾಗಲಿಲ್ಲ.

ಆ ಮಂಧ್ಯೆ ಕಂದಕಂಟ್ರ ಮೂರು ತಿಂಗಳು ಮನೆಯಲ್ಲೇ ಕೂತ. ಕಾಸಿಗೇನು ಕೊರತೆ ಇರಲಿಲ್ಲ. ಆದರೆ ಸುಮ್ಮನೆ ಕೂರುವುದು ಸಾಧ್ಯವಿರಲಿಲ್ಲ. ಎಸ್.ಎಸ್.ಎಲ್.ಸೀಲಿ ಒಂಬ್ಬತ್ತು ಸಲ ಢುಂಕಿ ಹೊಡೆದು ಅಲ್ಲೀಗಂಟ ಕೂತಿದ್ದು ಬಿಟ್ರೆ ಆಮೇಲೆ ಸುಮ್ಮನೆ ಕೂತ ಆಸಾಮಿಯೆ ಅಲ್ಲ.

ಒಂದು ದಿನ ಸಂಜೆಪೊಪ್ಪತ್ತು ತಮ್ಮ ಗುಂಪು ಸ್ಕೂಲ ಜಗಲಿ ಮೇಲೆ ಕೂತು ಹೋಗೋರು ಬರೋರ ನೋಡಿಕೊಂಡು ಕಾಡು ಹರಟೆ ಹೊಡೆಯುತ್ತಿದ್ದಾಗ ತಮ್ಮ ಗ್ರೂಪ್ ಪಂಚಾಯ್ತಿಯ ವಿಚಾರ ಬಂತು. ಅಪ್ಪನ ಕಾಲದಿಂದಲೂ ಕೂಡಳ್ಳಿಗೇ ಹೋಗುತ್ತಿರುವ ಛೇರ್ಮನ್‌ಗಿರಿ ತಮ್ಮೂರಿಗೆ ಯಾಕೆ ಬರೋಹಂಗೆ ಮಾಡಬಾರದು ಅನ್ನೋ ವಿಚಾರದಲ್ಲಿ ಎಲ್ಲರೂ ಒಮ್ಮತಕ್ಕೆ ಬಂದರು. ಅದರ ಫಲವಾಗಿ ಊರಿನ ಹಳೆ ತಲೆಗಳನ್ನು ಹಿಂದೆ ಸರಿಸಿ ಯಜಮಾನಿಕೆ ತಮಗೇ ಬೇಕು ಅನ್ನೋ ಹೊಸ ದನಿ ಕವಲೊಡೆಯಿತು. ಎಲ್ಲ ತಮ್ಮ ತಮ್ಮ ಮಕ್ಕಳೇ ಆಗಿದ್ದರಿಂದ ಯಜಮಾನರು ಸುಮ್ಮನಾದರು. ಹೊಸದರಲ್ಲಿ ಊರಿನ ಕೆಲವು ಕೆಲಸ ಜೋರಾಗಿಯೇ ನಡೆದವು.

ಕಂದಕಂಟ್ರ ಮತ್ತೆ ಕರೆ ಬಂತು ಅಂತ ಕೆಲಸದ ಮೇಲೆ ಹೋದ. ಅತ್ತ ಓದೋದು ಹತ್ತದೆ, ಇತ್ತ ಗೆಯೋ [illegible] ವ ಹರೆಯದ ಹೆಣ್ಮಕ್ಕಳ ಮನಸೊಳಗೂ ಗಂಡಸರಾಗದೆ ಸ್ಕೂಲ ಜಗಲಿ [illegible]ನ ತಮ್ಮದೇ ಬದುಕು ರೂಪಿಸಿಕೊಳ್ಳುತ್ತಿದ್ದ ಕಂದಕುಟ್ರ ಬಳಗಕ್ಕೆ ತಮ್ಮ ತಮ್ಮ ಯಜಮಾನಿಕೆ ತೋರಿಸಿಕೊಡಬೇಕೆಂಬ ಚಪಲ ಅಧಿಕವಾಯ್ತು. ಹಂಗಾಗಿ ಎಲ್ಲರೂ ಯಜಮಾನರಾದರು. ಅವರಿಗೆ ಅವರ ಅಪ್ಪಂದಿರು ಬೆನ್ನು ಹಿಂದೆ ನಿಂತರು. ಊರು ಬಿಗಿ ತಪ್ಪಿತು. ಸಣ್ಣಪುಟ್ಟದ್ದಕ್ಕೂ ಪರವಹಿಸಿ ಕೊನೆಗೆ ಬೇಕಿಲ್ಲದಿದ್ದ ಕೂಡಳ್ಳಿಗೇ ದೂರುವಯ್ಯುವ ಸ್ಥಿತಿ ಬಂತು.

ಕಂದಕುಟ್ರ ಕೆಲಸ ಕಳಕೊಂಡು ಮತ್ತೆ ಮನೆಗೆ ಬಂದ. ಪೇಟೇಲಿ ಇದ್ದ ಪುಟ್ಟನೂ ಅಂಗಡಿ ಮುಚ್ಚಿ ಬರಿಕೈಲಿ ವಾಪಸಾದ. ಅಷ್ಟೊತ್ತಿಗೆ ಸರಿಯಾಗಿ ಪಂಚಾಯ್ತಿ ಚುನಾವಣೆ ಬಂತು. ಕಂದಕುಟ್ರ ಬಳಗಕ್ಕೆ ಎಲ್ಲಿಲ್ಲದ ಹುರುಪು ಮೂಡಿತು. ತಮ್ಮೂರಿಗೆ ಇದ್ದ ನಾಲ್ಕು ಸೀಟಿಗೂ ತಾವೇ ನಿಲ್ತೀವಿ ಅಂದಾಗ ಇದೇಕೋ ಅತಿಯಾಯ್ತು ಅನಿಸಿ, ಮಾಜಿ ನಂಬ್ರ ನರಸಿಂಹೇಗೌಡ, ಸಿಂಗ್ರೀಗೌಡ, ಮರಿಯಪ್ಪ, ನಂಜಪ್ಪ ಮೊದಲಾದವರು ತಿಳಿವಳಿಕೆ ಹೇಳಲು ಹೋಗಿ ಮುಖ ಗಂಟಾಕಿಕೊಂಡು ಹಿಂದಿರುಗಿದರು. ವಿರಸ ಮೂಡಿತು. ಕೊನೆಗೆ ಇದ್ದ ನಾಲ್ಕು ಸೀಟಿಗೆ ನರಸಿಂಹೇಗೌಡ,

ಮರಿಯಪ್ಪ, ಸಿದ್ಧಣ್ಣ, ನಂಜಪ್ಪ, ನಿಂತರು; ರಂಗ, ಸಣ್ಣ, ಮರ್ಕಾಳಿ ಮತ್ತು ರಾಮುರನ್ನು ಕಂದಕುಟ್ರು ನಿಲ್ಲಿಸಿದ. ಈ ಚುನಾವಣೆ ಆ ಮುದಿ ಗೂಬೆಗಳಿಗೂ ನಮಗೂ ನಡಿಯೋ ಯುದ್ಧ ಅಂತ ಕಂದಕುಟ್ರು ಊರೊಳಗೆಲ್ಲ ಹೇಳಿಕೊಂಡು ಬಂದ 'ನಾವು ಗೆಲ್ದೆ ಇದ್ರೆ ನೋಡಿ' ಅಂತ ದಪ್ಪವಾಗಿ ಬುಟ್ಟಿದ್ದ ಮೀಸೆ ಹುರಿಮಾಡಿದ. ದನ ಎಮ್ಮೆ ಕಾಯುವ ಹೈಕಳನ್ನು ಹಿಡಿದು ಜೈಕಾರ ಹಾಕಿಸಿ ಮೆರವಣಿಗೆ ಮಾಡಿಸಿದ. ಕೂಡಳ್ಳಿ ಸಂಬಂಧ ಕೆಡಿಸಿದ್ರೆ ಮುಂದೆ ತನಗೆ ಅನುಕೂಲ ಇದೆ ಅಂತ ಊಹಿಸಿ ನಂಜಪ್ಪನ ಹೆಸರು ಮುಂದೆ ಮಾಡಿದ. ಅಲ್ಲಿಗೆ ಊರು ಒಡೆದು ಚೂರಾಯ್ತು. ಊರಿನಲ್ಲಿ ತೊಂಬತ್ತು ಭಾಗದಷ್ಟು ಒಂದೇ ಜಾತಿ ಇದ್ದರೂ ಅದರಲ್ಲಿ ಪಕ್ಷದ ಆಧಾರದ ಮೇಲೆ ಗುಂಪುಕಟ್ಟಿ ಹಗೆತನ ಹೆಮ್ಮರವಾಯ್ತು. ಪಕ್ಷದ ಜಗ್ಗಾಟದಲ್ಲಿ ನಂಜಪ್ಪನ ಬಲಕ್ಕೆ ಹೊಡೆತ ಬಿದ್ದು ತಾನು—ಮರಿಯಪ್ಪ ಇಬ್ಬರೇ ಉಳಿದರೂ ದೊಡ್ಡ ಕುಳವಾಗಿದ್ದರಿಂದ ಕುಗ್ಗಲಿಲ್ಲ.

ಒಟ್ಟಿನಲ್ಲಿ ಕಂದಕುಟ್ರು ತಾನು ಹೇಳಿದಂಗೇ ರಂಗ, ಮರ್ಕಾಳಿ, ರಾಮುರನ್ನು ಗೆಲ್ಲಿಸಿದ. ಆ ಕಡೆ ಮರಿಯಪ್ಪ ಒಬ್ಬ ಗೆಲ್ಲಬೇಕಾದ್ರೆ ಸಾಕುಬೇಕಾಯ್ತು.

ಮುಂದೆ, ಕಂದಕುಟ್ರ ಕೆಲಸ ಖಾಯಂ ಆಗಿ ಹೋಯ್ತು. ಕೂಡಿ ಹಾಕಿದ್ದ ದುಡ್ಡೂ ಕರಗತೊಡಗಿತು. ಹಣಬಲದ ಮೇಲೆ ಬೆಳೆದ ವರ್ಚಸ್ಸು ಉಳೀಲಿಲ್ಲ. ಚೆಡ್ಡಿಹರುಕ ಗಂಡನ ಮೇಲೆ ರೋಸಿ ಹೋಗಿದ್ದಲ್ಲದೆ ಹಳ್ಳಿ ಹೊಡಬಾಳು ಹತ್ತಲಾರದೆ, ಇದ್ದ ಮಗುವನ್ನೂ ಕಟ್ಟಿಕೊಂಡು ಹೆಂಡತಿ ಅಪ್ಪನ ಮನೆಗೆ ಹೋದಳು. ಅಷ್ಟೆಲ್ಲ ಹಣ ಸಂಪಾದನೆ ಮಾಡಿದರೂ ಕೊನೆಗೆ ಪಾಪರಾಗಿ ಉಳಿದ ಮಗನ ಬಗ್ಗೆ ಅಪ್ಪ ಅವ್ವ ಅಣ್ಣ ಅತ್ತಿಗೆಯರ ಮುಖದಲ್ಲೂ ಸಿಂಡರಿಕೆ ಮೂಡಿತು. ತನ್ನ ಬಳಗವೂ ಹಿಂದಿನಂಗೆ ಬೆನ್ನ ಹಿಂದೆ ಇರಲಿಲ್ಲ. ತನ್ನ ಆಪ್ತ ಭಂಟ ಪುಟ್ಟ, ಪಂಚಾಯ್ತಿ ಮೆಂಬರ್ ಮರ್ಕಾಳಿ, ಕರೀಗೌಡ ಮತ್ತು ಕೆಂಪನ ಮಗ ನಂಜ ಜಗಳವಾಡಿಯೇ ತೊರೆದಿದ್ದರು.

ಇನ್ನೂ ಕಂದಕುಟ್ರ ಹಿಂದೆ ಮುಂದೆಯೇ ಸುಳಿದಾಡುತ್ತಿದ್ದ ರಂಗ, ಸಣ್ಣ, ರಾಮು, ನರಸರಿಗೆ ಅವನು ಮದದಿಂದ ತಲೆತೂಗಿದ್ದು ತಿಳಿಯದ್ದೇನಲ್ಲ. ಆದರೂ ಕಾಫಿ, ತಿಂಡಿ, ಬೀಡಿ, ಬೆಂಕಿಪೊಟ್ಟಣ, ಪುರದ ಏಂಲ್ಟ್ರಿ ಹೋಟ್ಲು, ಶರಾಪು, ಕೈಗೆ ಕಾಸು ಗೀಸು ಅಂತ ಕಂದಕುಟ್ರ ಋಣದೊಳಗೆ ನೊಣದಂತೆ ಅಂಟಿಕೊಂಡಿದ್ದ ಇವರಿಗೆ ಬಿಡಿಸಿಕೊಳ್ಳಲಾಗಿರಲಿಲ್ಲ. ಈಗಲೂ ಯಾವೋನಾದರೂ ಬೈದರೆ, ಜಗಳಕ್ಕೆ ಬಂದರೆ ಪಂಚೆ ಬಿಚ್ಚಿ ತೊಡೆ ತಟ್ಟಿ ನಿಲ್ಲುತ್ತಿದ್ದೋನೇ ಅವನು. ಅಂಥ ಜರೂರತ್ತಿನ ಸಿನೇಹಗಾರರ ಹಿಂಗೆ ಸಾಯ್ತಾನೆ ಅಂದ್ರೆ ?

"ನೀವು ಕಿತ್ತೂ್ರ ಬಂದಂಗೆ ಇದ್ರಿ. ಅಂಥೋರು ನಮ್ಗೆ ಏನೂ ಗೊತ್ತಿಲ್ಲ ಅಂದ್ರೆ ಹೆಂಗೆ ? ನಿಮ್ಗೆಲ್ಲ ಗೊತ್ತದೆ ಆದ್ರೆ ಹೇಳ್ತಿಲ್ಲ" ಅಂತ ಕಂದಕುಟ್ರ ಅಣ್ಣ ಜಗಳಕ್ಕೆ ಬಂದಾಗಲೇ, ನಿಜವಾಗಿ ಹೇಳಲು ಏನೂ ಇರಲಿಲ್ಲ. ಅಂಥಾದ್ದರಲ್ಲಿ ಪೊಲೀಸ್ನೋರು ಬಂದಾಗ ಏನು ಹೇಳೋದು ? ಅನಿಸಿದ್ದೇ ತಡ ಅವರ ತೊಳ್ಳೆ ಗಡಗಡ ನಡುಗ್ತು.

ಮೊದಲೇ ಕಂದಕುಟ್ರ ಸಹವಾಸ ತೊರೆದಿದ್ದ ಮೆಂಬರ್ ಮರ್ಕಾಳಿ ಅವನು ಸತ್ತ ಅಂದಾಗ ಒಳ್ಳೆದಾಯ್ತು ಅಂತ ಖುಷಿಪಟ್ಟಿದ್ದ. ಆದರೆ ಪೊಲೀಸ್ನೋರು ಬಂದರಂತೆ ಅಂದಾಗ ಆ ಖುಷಿ ಉಳೀಲಿಲ್ಲ. ಮೊನ್ನೆ ರಾತ್ರಿ 20 ರೂಪಾಯಿ ಕೊಡಬೇಕಾಗಿತ್ತಂತೆ ಅಂತ ಆದರ ನೆಪ ಮಾಡ್ಕೊಂಡು ತಿರುಗಿ ಮನೆಗೆ ಬಂದಿದ್ದ. "ನಾಳಿಕ್ಕೆ ಬಿಸಾಕ್ತೀನಿ ಹೋಗು" ಅಂದ್ರೂ ಕೇಳದೆ ಮಾತಿಗೆ ಮಾತು ಬೆಳೆದು "ನನ್ನ ಹೆಂಡ್ತಿ ಇಟ್ಕೊಂಡಿದ್ದೆ ತೀರೋಯ್ತು ಅಂತ ಹೇಳೋ ಗಿರೇಸ್ತ, ಬುಟ್ಟಿ ಬಂಡ್ತೀನಿ" ಅಂತ ಹಂಗಿಸಿದ. ಅದೇನು ಸಿಟ್ಟು ಬಂತೋ ಗಂಡಹೆಂಡ್ತಿ ಸೇರಿಕೊಂಡು ಬಾರಿಸಿ ಹಣ್ಣುಗಾಯಿ ನೀರುಗಾಯಿ ಮಾಡಿ ಆಚೆಗೆ ದಬ್ಬಿದಾಗ ಕತ್ತಲೆಯಲ್ಲಿ ಕರಗಿ ಹೋಗಿದ್ದ. ಆಗ ಏನಾದ್ರೂ ಒಳ ನೋವು ಬಿದ್ದು ಹಿಂಗೆ ಮಾಡಿಕೊಂಡನೋ ಹೆಂಗೆ ? — ಅನಿಸಿದ್ದೇ ಹೆಂಡತಿಗೆ ಹೇಳಿ "ಯಾರಾದ್ರು ಕರೆಯೊಕ್ಕೆ ಬಂದ್ರೆ ಬಾರೆ ಸಂತ್ಗೆ ಹೋದ್ರೂ ಅಂತೇಳು" ಎಂದು ಕಣಜದಲ್ಲಿ ಅವಿತುಕೊಂಡಿದ್ದ.

ಇತ್ತ ಕರೀಗೌಡನಿಂದ, ಕೂಡಳ್ಳಿ ದ್ಯಾವಪ್ಪನ ರಾಗಿಮೆದೆಗೆ ಬೆಂಕಿ ಹಾಕಿಸಿದ್ದು ಕೆಂಪನ ನಂಜನಿಂದ ಹೊರಬಿದ್ದಾಗ "ನಂಗೂ ಇದಕ್ಕೂ ಏನೂ ಸಂಬಂಧ ಇಲ್ಲ. ಆ ದ್ಯಾವಪ್ಪನ ದನಗಳು ಇವ್ರ ಹೊಲ ಮೇದ ಜಗಳಕ್ಕೆ ದ್ವೇಷ ತೀರಿಸಿಕೊಂಡ್ರೆ ಅದಕ್ಕೆ ನಾನೇನು ಮಾಡ್ಲಿ" ಅಂತ ಕರೀಗೌಡನ ಮೇಲೆಯೇ ಹೊರಿಸಿ ತಾನು ನ್ಯಾಯದ ಮುಂದೆ ಕಡ್ಲೆ ತಿಂದು ಕೈತೊಳ್ಕೊಂಡಂಗೆ ಮಾತಾಡಿದ್ದ. ಕರೀಗೌಡನಿಗೆ ಅನ್ನೇಕಾರನ ಮಾತು ಕೇಳಿ ತಡಿಯೋದಿಕ್ಕಾಗದೆ ಎಕ್ಕಡ ತಕ್ಕೊಂಡು ಬಾರಿಸಿಬಿಟ್ಟಿದ್ದ. ಆ ಅವಮಾನಕ್ಕೇನಾದ್ರು ಹಿಂಗೆ ಮಾಡ್ಕೊಂಡು ಬುಟ್ಟನೋ ಹೆಂಗೆ ಅಂತ ಕರೀಗೌಡನ ಅಪ್ಪ ಅನುಮಾನಪಟ್ಟು ಪೊಲೀಸ್ನೋರು ಹೋಗೋಗಂಟ ಅವಿತಿರುವಂತೆ ಹೊಲದ ಕಡೆ ಓಡಿಸಿದ್ದ ಬಿಯರ್‌ನ ಅಂಗಡಿ ಬರಿದು ಮಾಡಿ ಬಂದೆ ಅಂತ ಜಗಳವಾಡಿದಾಗಿನಿಂದ ದೂರವಾಗಿದ್ದ ಪುಟ್ಟನೂ ಹೆಂಗಾದ್ರು ಆಗ್ಲಿ ಅಂತೇಳಿ ಕರೀಗೌಡನ ಜೊತೆ ತಲೆ ಮರೆಸಿಕೊಂಡಿದ್ದ.

ನಂಜಪ್ಪ ಒಬ್ಬ ಮಾತ್ರ "ಆ ರಾಗಿ ಮೆದೆಗೆ ಬೆಂಕಿ ಹಾಕಿಸಿ ನನ್ಮಾನ ಕಳೆದಾಗ್ಲೇ ಕಂದಕುಟ್ರು ಇರ್ಲಿ, ಅವರ ಮನೆಯೋರ ಕಡೆಗೂ ನಾನು ತಲೆ ಹಾಕಿ

ಮಲಗೋದು ಬುಟ್ಟೆ. ನಿಮ್ಗೆ ಅನುಮಾನ ಬಂದ್ರೆ ನಾನು ಏನು ಹೆಂಗ ಅಂತ ಯಾರಿಗೆ ಬೇಕಾದ್ರೂ ವಿಚಾರಿಸ್ಕೊ ಬೌದು ಸೋಮಿ" ಅಂತ ಕಡುಪಾಗಿ ಹೇಳಿ ಹೋಗಿದ್ದ.

ಬಿಸಿಲಿನ ಕಾವು ಏರತೊಡಗಿದಂತೆ ಜನದ ಮನದೊಳಗೆ ತಕ್ಕೆ ಮಡಗಿಕೊಂಡಿದ್ದ ಕುತೂಹಲ–ಭೀತಿಗಳು ಕುಗ್ಗ ತೊಡಗಿದವು. ಸೇದೋಬಾವಿ ಬದಿ ನಿಂತು "ತಲೆ ತಿರುಕವನ್ನ ಮಂಗ ಬದ್ಕಿದಾಗ್ಲೂ ಇರೋರ್‍ನ ಇರಗೊಡ್ನಿಲ್ಲ ಸತ್ರೂ ಅಪ್ಪಂತ ಸಾವು ತರ್ನಿಲ್ಲ. ತನ್ ನೆಲೆ ತಾ ತಿಳೀದೆ ಕೈಲಿ ಕಾಸು ಕುಣಿತದೆ ಅಂತ ಮೆರ್‍ದ್ರೆ ಇನ್ನೇನಾಯ್ತಿದ್ದೇಳು" ಎಂದು ಲೊಟಿಗೆ ಮುರಿಯುತ್ತ ಅಂದ ಹಿರಿತಾಯಕ್ಕನ ಮಾತು ಆ ಆತಂಕದ ಮೌನವನ್ನು ಭೇದಿಸಿ ಬಂತು, ಎಲ್ಲರ ಕಣ್ಣು ಅತ್ತ ಹೊರಳಿದವು. ಇಸ್ಕೂಲ್ ಜಗಲಿ ಮೇಲೆ ಕೂತಿದ್ದ ಇನ್‌ಸ್ಪೆಕ್ಟರಿಗೆ ರೇಗಿಸಿದಂತನಿಸಿ, ಅವಳತ್ತ ದುರುಗುಟ್ಟಿ ನೋಡಿದ್ರು, ಹಿರಿತಾಯಕ್ಕ ಹಾಗೇ ನಿಂತಿದ್ದಳು.

ಇನ್‌ಸ್ಪೆಕ್ಟರು ಎದ್ದು "ಏನಿಂಗೆ ಮುತ್ಕೊಂಡಿದ್ದೀರಿ ಅತ್ಲಾಗಿ ಹಾಳಾಗಿ ಹೋಗಿ" ಎಂದು ಗದರಿಸುತ್ತಾ ಅವರ ಮಧ್ಯೆ ತಲೆತಗ್ಗಿಸ್ಕೊಂಡು ಕೂತಿದ್ದ ಕಂದಕುಟ್ಟಪ್ಪನ ಕೂಗಿದರು. ಮಗನ ಸಾವಿನ ಬಗ್ಗೆ ಪದೇ ಪದೇ ಕೆದಕಿದರೂ ಅವನು ಮೌನವನ್ನೇ ವಹಿಸಿದ. ಅವರಿಗೆ ಏನು ಹೇಳಬೇಕೂ ಹೊಳೀಲಿಲ್ಲ. ತನ್ನ ಮಗನ ಸಾವಲ್ಲಿ ಇವರಿಗೆ ಕಂಡೊಷ್ಟು ಸೂಕ್ಷ್ಮ ಅವನಿಗೆ ಕಂಡಿರಲಿಲ್ಲ. ಆದ್ರೂ ತಿರುಗಿ ತಿರುಗಿ ಕೇಳುತ್ತಿದ್ದ ಇನ್‌ಸ್ಪೆಕ್ಟರಿಗೆ "ನನ್‌ಮಂಗ ಸತ್ತ ನೋವಿದ್ರೂ ಆ ಸಂಕ್ಟದಿಂದ ಇನ್ನೊಬ್ರ ಮ್ಯಾಲೆ ಅನ್ಯಾಯ್ಕಾರದ ಮಾತಾಡ್ಲಾರೆ ಬುದ್ಧಿ, ಊರಿಗೆ ಊರೇ ಅವನು ಸತ್ತುದ್ಕೆ ಸಾಕ್ಷಿ ಹೇಳೋವಾಗ ಇನ್ನು ನಾನೇನು ಹೇಳೋದಿದೆ" ಅಂತ ಕೈ ಮುಗಿದು ಇತ್ತ ತಿರುಗಿದ.

●

"ಒಬ್ಬ ಮನುಷ್ಯನ ಯೋಗ್ಯತೆಯನ್ನು ಅವನ ಸ್ನೇಹಿತರನ್ನು ನೋಡಿ ನಿರ್ಧರಿಸುವಂತೆಯೇ ಅವನ ಶತ್ರುಗಳನ್ನು ನೋಡಿಯೂ ನಿರ್ಧರಿಸಬಹುದು"

—ಜೋಸೆಫ್ ಕೊನ್ರಾಡ್

# ಮಹಾಕವಿ ; ಶ್ರೀ ಶ್ರೀ

—ಸ. ರಘುನಾಥ

ಲೇಖಕ – ಕವಿ – ಸಾಹಿತಿ – ಇಡೀ ಸಮುದಾಯದ ಸಾಮಾಜಿಕ, ಸಾಂಸ್ಕೃತಿಕ ರಂಗದಲ್ಲಿ ಕಳಕಳಿಯಿಂದ ತನ್ನನ್ನು ಒಂದಲ್ಲ ಒಂದು ವಿಧದಲ್ಲಿ ತೊಡಗಿಸಿಕೊಂಡವನಾಗಿರುತ್ತಾನೆ. ಅವನ ಸಿದ್ಧಾಂತಗಳು, ಅವನು ಪ್ರತಿನಿಧಿಸುವ ವರ್ಗ, ಪ್ರತಿಪಾದಿಸುವ ತತ್ವ ಯಾವುದೇ ಆಗಿರಲಿ, ಅದನ್ನು ಇಡೀ ಸಮುದಾಯ ಒಪ್ಪದಿದ್ದರೂ ಅವನು ಜೀವಂತನಿರುತ್ತಾನೆ. ಇಂಥ ಬರವಣಿಗೆ ಯಾವ ಭಾಷೆಯಲ್ಲಿದ್ದರೂ ಅದು ಎಲ್ಲರದೂ ಆಗಿರುತ್ತದೆ; ವಿಶೇಷವಾಗಿ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಪಾತಳಿಯಲ್ಲಿ ತನ್ನೊಳಗಲ್ಲಿ ಸಮುದಾಯದ ಸ್ಪಂದನವನ್ನು ತೊಡಗಿಸಿದಲ್ಲಿ; ಇಂಥ ಸಂದರ್ಭದಲ್ಲಿ ಬರವಣಿಗೆಯ ಪರಿಣಾಮ ಲೇಖಕನ 'ಶೈಲಿ', ಪಕ್ವತೆಯಿಂದಾಗಿ ವ್ಯತ್ಯಾಸವಾಗಬಹುದೇ ಹೊರತು ಗುರಿಗಳು ಮಾತ್ರ ಮಹತ್ವದವುಗಳಾಗಿರುತ್ತವೆ. ಆದುದರಿಂದಲೇ ಇದು ಇಂಥ ಭಾಷೆಯ, ಇಂಥ ಭಾಷೆಯವನ ಬರವಣಿಗೆಯೆಂಬ ವಿಂಗಡಣೆಸಲ್ಲ. ಇದು ಇಂಥವನ ಇಂಥ ಬರವಣಿಗೆಯೆಂದು ಮಾತ್ರ ಆಗಬೇಕು. ನೆಲೆಸಿರುವ ಸಾಮಾಜಿಕ ನಡಾವಳಿ, ಸಾಂಸ್ಕೃತಿಕ 'ಒತ್ತು' ಬೇರೆ ಬೇರೆಯಿರಬಹುದು. ಬದುಕು ಮತ್ತು ಬರಹ, ಭಾವನೆ ಮತ್ತು ಸಂಬಂಧಗಳು ಒಂದೇ ಪಾತಳಿಯಲ್ಲಿರುತ್ತವೆ. ಆ ಪಾತಳಿಯ ನೆಲೆಯೇ ವಿಭಿನ್ನ ಸಂಸ್ಕೃತಿ – ಭಾಷೆಗಳ ಕೃತಿಗಳ ಅಧ್ಯಯನಕ್ಕೆ ನಮ್ಮಲ್ಲಿ ತುಡಿತವನ್ನುಂಟುಮಾಡುವುದು. ಇಲ್ಲವಾಗಿದ್ದಲ್ಲಿ ಷೇಕ್ಸ್‌ಪಿಯರ್, ಸಾರ್ತ್ರೆ – ಭಾರತಕ್ಕೆ ಬರುತ್ತಿರಲಿಲ್ಲ, ವಾಲ್ಮೀಕಿ, ವ್ಯಾಸರು ಕಡಲು ದಾಟುತ್ತಿರಲಿಲ್ಲ.

ಬರಹ ಮಾನವೀಯ ಸಂಬಂಧಗಳನ್ನು ಬೆಸೆಯುವಂತಿರಬೇಕು; ಭದ್ರಗೊಳಿಸುವಂತಿರಬೇಕು. 'ಅಂತರ ರಾಷ್ಟ್ರೀಯ ಪ್ರಜ್ಞೆ' ಯೆಂಬ ಕೂಗೆದ್ದಿರುವ ಈ ಶತಮಾನದಲ್ಲಿಯಂತೂ ಸಮ–ಸಮಾನತೆಯ ಬೇರುಗಳನ್ನು ಆಳಕ್ಕಿಳಿಸುವಂತಿರಬೇಕು. ಯಾವಾಗಲೂ ಸಮತೆ ತರುವತ್ತ ಸಂಘರ್ಷವಿರಬೇಕೇ ಹೊರತು, ಅವಸ್ಥಾಭೇದಗಳನ್ನು ಉಳಿಸಿ ಬೆಳೆಸಿ

---

ಸ. ರಘುನಾಥ, ಅಧ್ಯಾಪಕ, ಮಾಧ್ಯಮಿಕಶಾಲೆ, ಗೌನಿಪಲ್ಲಿ. ಶ್ರೀನಿವಾಸಪುರ (ತಾ) ಕೋಲಾರಜಿಲ್ಲೆ.

ಕೊಂಡು ಹೋಗಲು ಇರಬಾರದು. ಈ ಎಲ್ಲ ದೃಷ್ಟಿಯಿಂದ ನಮ್ಮ ನೆರೆಯ ಮಹಾಕವಿ ಶ್ರೀ ಶ್ರೀ - ಅಧ್ಯಯನ ಯೋಗ್ಯ.

ಶ್ರೀ ಶ್ರೀ ಈ ಶತಮಾನದ ಮೂರನೇ ದಶಕದಿಂದ ಎಂಟನೇ ದಶಕದವರೆಗೂ ತೆಲುಗು ವಾಙ್ಮಯ ಲೋಕದಲ್ಲಿ ಮೆರೆದ, 'ಇದು ಶ್ರೀ ಶ್ರೀ ಯುಗ' ಎಂದು ಹೇಳಿಕೊಂಡ ಎಂಟೆದೆಯ ಕವಿ.

ವಿಶಾಖಪಟ್ಟಣದಲ್ಲಿ 2-1-1910 ರಂದು ಹುಟ್ಟಿದ ಶ್ರೀರಂಗಂ ಶ್ರೀನಿವಾಸ ರಾವ್ ಸಾಹಿತ್ಯ ಜಗತ್ತಿನಲ್ಲಿ ಶ್ರೀ ಶ್ರೀ ಆದರು. ತಂದೆಯ ಗುರುತನದಲ್ಲಿ ಸಣ್ಣ ವಯಸ್ಸಿನಲ್ಲೇ ತೆಲುಗು-ಸಂಸ್ಕೃತ ಕಾವ್ಯಾಧ್ಯಯನಕ್ಕೆ ತೊಡಗಿ ಹತ್ತನೇ ವಯಸ್ಸಿನಲ್ಲಿ ಛಂದೋಬದ್ಧವಾಗಿ ಕಿರುಗವಿತೆ ಕಟ್ಟಿದ ಪ್ರತಿಭಾಶಾಲಿ. ಮಧ್ಯಮ ವರ್ಗಕ್ಕೆ ಸೇರಿದ ಈತ ಬದುಕಿನ ಬಹುಕಾಲ ಬಡತನದ ಕಹಿ ಕಾವಳವನ್ನು ಕಡಿದು ಕುಡಿದ ವ್ಯಕ್ತಿ. ನಗರ (ಮದರಾಸು)ದ ಬದುಕಿನಲ್ಲಿ ಏಕಾಂಗಿಯಾಗಿ ಅಲ್ಲಿನ ಬಡ ಜನರ ಬದುಕಿನ ಬವಣೆಯನ್ನು ಕಣ್ಣಾರೆ ಕಂಡು ಅನುಭವಿಸಿದ. ಪದವಿ ಗಳಿಸಿದ ನಂತರ 1938 ರಲ್ಲಿ 'ಆಂಧ್ರಪ್ರಭ' ದೈನಿಕದಲ್ಲಿ ಉಪಸಂಪಾದಕ ವೃತ್ತಿ, 1942 ರಲ್ಲಿ ಎ.ಐ.ಆರ್. ನಲ್ಲಿ ಅನೌನ್ಸರ್, 1943 ರಲ್ಲಿ ಸೈನ್ಯಕ್ಕೆ ಸೇರ್ಪಡೆ. 1945 ರಲ್ಲಿ ಸೈನ್ಯ ತೊರೆದು ನಟಾಲಿ ನಾಟಕ ಕಂಪೆನಿ ಸೇರಿದ್ದು. ಮರುವರ್ಷವೇ ಹೊಟ್ಟೆ ಪಾಡಿಗಾಗಿ ಆಯ್ದುಕೊಂಡ ದುಡಿಮೆಯ ರಂಗ - ತೆಲುಗು ಚಿತ್ರರಂಗ. ಇದು 1946 ರಿಂದ ಉಸಿರಿರುವ ತನಕ ಶ್ರೀ ಶ್ರೀ ಯನ್ನು ಆರ್ಥಿಕವಾಗಿ ಸಲಹಿತು.

## 'ಮಹಾಪ್ರಸ್ಥಾನಂ' ಹಿಂದಿನ ತೆಲುಗು ಕಾವ್ಯಯುಗ

20ನೇ ಶತಮಾನದ ಆರಂಭ ಕಾಲದಲ್ಲಿ ತೆಲುಗು ಸಾಹಿತ್ಯ ರಂಗಕ್ಕೂ ಕನ್ನಡ ಸಾಹಿತ್ಯ ರಂಗಕ್ಕೂ ಬಹಳಷ್ಟು ಸಾಮ್ಯವಿದ್ದಿತು. ಹೊಸಭಾವನೆಗಳನ್ನು ಹೊತ್ತ-ಭಿನ್ನ ಮಾರ್ಗದ ಗುರುಜಾಡ ಅಪ್ಪಾರಾವು, ಉನ್ನವ ಲಕ್ಷ್ಮೀನಾರಾಯಣ ಪಂತುಲು, ಗಿಡುಗು ರಾಮಮೂರ್ತಿ, ಕಂದುಕೂರಿ ವೀರೇಶಲಿಂಗಂ ಮುಂತಾದವರು ಹೊಸ ಕಾವ್ಯ ಮಾರ್ಗವೊಂದರ ಹುಟ್ಟಿನ ಬಗ್ಗೆ ಭರವಸೆ ಹುಟ್ಟಿಸಿದ್ದರೂ ಸೃಷ್ಟಿಯಾದ ಬಹುಪಾಲು ಸಾಹಿತ್ಯ ಮಾರ್ಗ ಸಾಹಿತ್ಯವೇ ಆಗಿತ್ತು. ಹೊಸ ರಕ್ತ ಸಂಚಾರ ಸಾಧ್ಯವಾಗದೆ ಉಳಿದಿತ್ತು. ಕಾವ್ಯ ಅತ್ಯಂತ ನಿರ್ದಿಷ್ಟ - ಚಿಕ್ಕ - ಪರಿಧಿಯಲ್ಲಿ ಪರಿಭ್ರಮಣಗೊಂಡಿತ್ತು. ಪ್ರೇಮ - ವಿರಹ, ಚಂದಿರಮ್ಮಗಳ ಹೊರತಾದ ಯಾವುದೇ ಸಾಮಾಜಿಕ ಸಮಸ್ಯೆ ಕಾವ್ಯ ವಸ್ತುವಿಗೆ ಅನರ್ಹವೆಂದು ಕವಿಗಳು ಬಗೆದಂತಿತ್ತು. ಹೀಗಿದ್ದ ಕಾಲದಲ್ಲಿ ಶ್ರೀ ಶ್ರೀ (1929) ಮೊಟ್ಟ ಮೊದಲಿಗೆ 'ಸುಪ್ರಾಸ್ಥಿಕಲು' ಎಂಬ ಗೀತ ರೂಪಕದ

ಮೂಲಕ ಕಾವ್ಯ ಲೋಕಕ್ಕೆ ವಸ್ತು ಭೇದ ದರ್ಶನ ಮಾಡಿಸಿದರಾದರೂ ಅದು ಇತರರಲ್ಲಿ ಯಾವ ಬದಲಾವಣೆಯನ್ನು ತರಲಿಲ್ಲ. ಅದು ಶ್ರೀ ಶ್ರೀ ಯವರ ಗತಿಯ ದಿಕ್ಕನ್ನೇ ಬದಲಿಸುವಲ್ಲಿ ಮಾತ್ರ ಯಶಸ್ವಿಯಾಯಿತು. ಮುಂದೆ 'ಮಹಾ ಪ್ರಸ್ಥಾನಂ' ರಚನೆಗೆ ನಾಂದಿ ಹಾಡಿತು. ಅದರೊಳಗಿನಿಂದಲೇ ತೆಲುಗು ಕಾವ್ಯಕೆ ಹೊಸತೊಂದು ಮಾರ್ಗ, ಆಶಯ ರೂಪವೇರ್ಪಟ್ಟಿತು. ಹೀಗೆ ಆರಂಭವಾದುದು ಶ್ರೀ ಶ್ರೀ ಯುಗ. (ಆದರೂ ಈ ಯುಗದ ಜಾಡು ಗುರುಜಾಡ ಅಪ್ಪರಾವು ಅವರದು. ಇದನ್ನು ಶ್ರೀ ಶ್ರೀ ಒಪ್ಪಿಕೊಂಡಂತೆ ನಿರಾಕರಿಸಿದವರೂ ಆಗಿರುವರು.)

## 'ಪ್ರಭವ' ದಿಂದ 'ಮಹಾಪ್ರಸ್ಥಾನಂ' ವರೆಗೆ

ಶ್ರೀ ಶ್ರೀ 1928 ರಲ್ಲಿ ತಮ್ಮ ಮೊದಲ ಕವನ ಸಂಕಲನ 'ಪ್ರಭವ' ಪ್ರಕಟಿಸಿದಾಗ ವಿಶ್ವನಾಥ ಸತ್ಯನಾರಾಯಣ, ದೇವುಲಪಲ್ಲಿ ಕೃಷ್ಣಶಾಸ್ತ್ರಿಗಳಂತಹ Romantic ಕವಿಗಳ ಪ್ರಭಾವಕ್ಕೆ ಒಳಗಾಗಿದ್ದರು. ನಂತರ ಅವರು ತನ್ನದೇ ಆದ ಶೈಲಿಯ ಅನ್ವೇಷಣೆಯಲ್ಲಿ ತೊಡಗಿದರು. ಇಂಗ್ಲೀಷ್, ಫ್ರೆಂಚ್, ರಷ್ಯನ್ ಸಾಹಿತ್ಯವನ್ನು ಆಳವಾಗಿ ಅಧ್ಯಯನ ಮಾಡಿದರು. ಅವರಲ್ಲಿ ವಿಚಕ್ಷಣ ದೃಷ್ಟಿ ಬೆಳೆಯಿತು. ಅನುಭವ ವಿಶಾಲವಾಯಿತು. ಬರಬರುತ್ತ ಜಾಗತಿಕ ರಾಜಕೀಯ, ಸಾಮ್ಯವಾದ, ಮಾರ್ಕ್ಸಿಸ್ಟ್ ಸಿದ್ಧಾಂತಗಳು ಅವರನ್ನು ಆಕರ್ಶಿಸಿದವು. ಅಲ್ಲಿಯವರೆಗೆ ತನ್ನ ಪರಿಸರದ ಇತರೆ ಕವಿಗಳಂತೆ ಕಾಲ್ಪನಿಕ ವಸ್ತುಗಳೊಂದಿಗೆ ಕಸರತ್ತು ಮಾಡುತ್ತಿದ್ದ ಕವಿಯಲ್ಲಿ ನವ ಕಾವ್ಯ ಚೈತನ್ಯ ಮೂಡಿತು. ಶ್ರೀ ಸಾಮಾನ್ಯ, ಬದುಕು, ಸಮಸ್ಯೆಗಳು ಕಾವ್ಯ ವಸ್ತುವಾಗಿ ಪರಿಣಮಿಸಿತು. ಈ ಹಿಂದೆ ಪ್ರಕಟಿಸಿದ 'ಪ್ರಭವ'ದ ಹೆಸರನ್ನು 'ಜಯಭೇರಿ' ಮರೆಮಾಡಿಬಿಟ್ಟಿತು. ಈ ಕವಿತೆ ಶ್ರೀ ಶ್ರೀ ತನಕ್ಕೆ ನಾಂದಿ ಹಾಡಿತು. ಮುಂದಕ್ಕೆ ಅವರಲ್ಲಿ ಹೊಸ ಆಲೋಚನೆ, ಮತ್ತೊಂದು ಪ್ರಪಂಚದ (ಮರೋಪ್ರಪಂಚ) ಹುಟ್ಟಿಗಾಗಿ ಹುಡುಕಾಟ ಪ್ರಾರಂಭವಾಯಿತು. 'ಮಹಾಪ್ರಸ್ಥಾನಂ' ಸಂಕಲನದ ಕವಿತೆಗಳು ಸೃಷ್ಟಿಯಾದವು ಅದು ಶ್ರೀ ಶ್ರೀ ಹೆಸರನ್ನು ಚಿರಗೊಳಿಸಿದ ಸಂಕಲನ. ಅದು ಬೃಹತ್ ಗ್ರಂಥವಲ್ಲ. ಜನತೆಗೆ ಕೊಟ್ಟಿದ್ದು 'ಮಹಾ', ಅದನ್ನು ಆದರಿಸಿದರು. ಪ್ರಕಟಗೊಂಡಂದಿನಿಂದ (1950) ಇಂದಿಗೆ ಸುಮಾರು ಐವತ್ತು ಮುದ್ರಣಗಳನ್ನು ಕಂಡಿದೆ.

'ಮಹಾಪ್ರಸ್ಥಾನಂ' ಸಂಕಲನದಲ್ಲಿ ನಲವತ್ತೊಂದು ಕವಿತೆಗಳಿವೆ. ಎಲ್ಲವೂ 1933 ರಿಂದ 40 ರ ಅವಧಿಯಲ್ಲಿ ರಚನೆಗೊಂಡವು. ಕವಿತೆಗಳ ವಸ್ತು, ವಿನ್ಯಾಸ, ಶೈಲಿ, ಶಿಲ್ಪ ಎಲ್ಲವೂ ಅಂದಿನ ತೆಲುಗು ಸಾಹಿತ್ಯ ಸಂದರ್ಭಕ್ಕೆ ಹೊಸತು.

ತೆಲುಗು ಅಭ್ಯುದಯ ಕವಿತಾ ನಿರ್ಮಾಣಕನೆಂದೂ ಯುಗಕರ್ತನೆಂದೂ ಶ್ರೀಶ್ರೀ ಗೆ ಹೆಸರು ತಂದ 'ಮಹಾಪ್ರಸ್ಥಾನಂ' ನಲ್ಲಿನ ಕವಿತೆಗಳಲ್ಲಿ ಮುದಿ ಭಿಕ್ಷುಕಿಯ ಚಿತ್ರದಿಂದ ಹಿಡಿದು ಅಂತರಂಗದ ಹುಡುಕಾಟದವರೆಗೆ ವಸ್ತು ವೈವಿಧ್ಯದ ಬೆಡಗನ್ನು ಕಾಣಬಹುದು. ಉದಾ :– 'ಮಹಾಪ್ರಸ್ಥಾನಂ' ಭಿಕ್ಷುವರ್ಷೀಯಸಿ, ಋಕ್ಕುಲು, ಒಕರಾತ್ರಿ, ನೀಡಲು, ಐ, ಪೇದಲು, ದೇಶಚರಿತ್ರಲು, ಜಗನ್ನಾಥುನಿ ರಥ ಚಕ್ರಾಲು, ದೇನಿಕೊರಕು ಮುಂತಾದವುಗಳು.

'ನಾನು ಕ್ರಾಂತಿ ತರುತ್ತೇನೆ' ಎಂಬ ಕವಿಯ ವ್ಯಕ್ತಿಗತ ಸ್ಪೃಹೆ, ಆತ್ಮಘೋಷಣೆಗಳು ಭಾರತೀಯ ಆರಂಭಿಕ ಕ್ರಾಂತಿ ಕಾವ್ಯಗಳಲ್ಲೇ ಕಂಡು ಬರುವುದರಿಂದ 'ಶ್ರೀಶ್ರೀ' ಯವರೂ ಇದಕ್ಕೆ ಹೊರತಲ್ಲ. ಉದಾಹರಣೆಗೆ ಅವರ "ಜಗನ್ನಾಥುನಿ ರಥ ಚಕ್ರಾಲು" ಕವಿತೆ—

"ಆಕಾಶ ಮಾರ್ಗ ಹಿಡಿದು/ಆತುರದಿ ಸಾಗುವಂಥ
ಜಗನ್ನಾಥ ರಥ ಚಕ್ರಗಳ/ಭೂ ಮಾರ್ಗ ಹಿಡಿಸುತ್ತೇನೆ
ಭೂಕಂಪ ಹುಟ್ಟಿಸುತ್ತೇನೆ."

ಇಂಥ ಆತ್ಮಾಶ್ರಯದ ಬಹಳಷ್ಟು ಸಾಲುಗಳು 'ಮಹಾ ಪ್ರಸ್ಥಾನಂ' ಸಂಕಲನದಲ್ಲಿವೆ.

ಸೃಷ್ಟಿಯ ಯಾವುದೇ ವಸ್ತು ಕಾವ್ಯಕ್ಕೆ ಅನರ್ಹವಲ್ಲ. ಎಲ್ಲವೂ ಅನರ್ಘ್ಯವೇ ಎಂದು 'ವಸ್ತು' ಕುರಿತು ತಂದ ಕ್ರಾಂತಿ ದೃಷ್ಟಿಗೆ, ಪುರಾತನ ಕಾವ್ಯದಲ್ಲಿದ್ದ 'ವಸ್ತು ನಿಯಮ' ಅಥವಾ 'ಬದ್ಧತೆ' ಯನ್ನು ಭಂಗಿಸಿ, ಪ್ರತಿ ವಸ್ತುವಿನ ಅಂತರ್ಯದಲ್ಲೂ ಕಾವ್ಯಸೆಲೆಯಿದೆಯೆಂಬುದನ್ನು ತೋರಿಸಿದ ಕವಿತೆ ಋಕ್ಕುಲು'.

"ನಾಯಿಮರಿ/ಬೆಂಕಿಕಡ್ಡಿ
ಬಾಗಿಲ ಚಿಲಕ/ಆರತಿ ತಟ್ಟೆ
ಅಲ್ಲವಾವುದು ಕವಿತೆಗನರ್ಹ/ಹೌದೌದು ಶಿಲ್ಪ ಅನರ್ಘ್ಯ"

ಸಾಧ್ಯತೆಗಳೇನೇ ಇದ್ದರೂ ಈ ಕವಿತೆ ಕವಿಯ ಶುದ್ಧ ಕಲಾವಿದ ದೃಷ್ಟಿಯನ್ನು ಸಾರುತ್ತದೆ. ಕೇವಲ ಕಲಾವಿದನ ದೃಷ್ಟಿಯಲ್ಲೇ ಎಲ್ಲವನ್ನೂ ಕವಿ ಕಂಡವನಾಗಿದ್ದರೆ ಸಾಮಾನ್ಯನ ನಡುವೆ ಮೆರೆಯುತ್ತಿರಲಾಗುತ್ತಿರಲಿಲ್ಲ. ಕವಿ ಕಷ್ಟ, ಕಾರ್ಪಣ್ಯ, ನೋವು ಎಲ್ಲದರ ಅಂತರಾಳವನ್ನು ಬಗೆದವನಾಗಿದ್ದಾನೆ. 'ನೀಡಲು' ಕವಿತೆಯಲ್ಲಿ ಬಡ ಕಾರ್ಮಿಕ ಲೋಕವನ್ನು ಕಾವ್ಯವಸ್ತುವಾಗಿ ಸ್ವೀಕರಿಸಲಾಗಿದೆ. ಅವರ ನೆಲೆಗಳನ್ನು

ಹೊಗೆ ಗೂಡಾಗಿ, ಬದುಕನ್ನು ಮರಳ್ಗಾಡ ಒಡಗಳಿಂದು ಚಿತ್ರಿಸಲಾಗಿದೆ. ಇಂಥವರ ಬದುಕಿನ 'ದೇಶಚರಿತೆ'—

"ನರಜಾತಿ ಚರಿತ್ರೆ ಸಮಸ್ತ/ರಣರಕ್ತ ಪ್ರವಾಹ ಸಿಕ್ತ"

ಇವರ ಪ್ರಭುಂಗಳದು "ಪರಸ್ಪರ ಹರಣೋದ್ಯೋಗ". ಅದರಿಂದಾಗೇ ಬಿಡುಗಡೆ ಪಡೆಯಲು ಕರೆಯುತ್ತಿದೆ ಮತ್ತೊಂದು ಜಗತ್ತು. ಅದ ತೆರದು—

"ನಡೆಯಿರಿ ಮುಂದಕ್ಕೆ/ನಡೆಯಿರಿ ತಳ್ಳಿ
ಹೋಗುವ ಹೋಗುವ ಮೇಲ್ಮೇಲಕ್ಕೆ." (ಮಹಾಪ್ರಸ್ಥಾನಂ)

ಶ್ರೀಶ್ರೀ ಮಾರ್ಕ್ಸಿಸ್ಟ್ ಸಿದ್ಧಾಂತಕ್ಕೆ ಒಲಿದು ಅದನ್ನೇ ಕಟ್ಟಿ ಬೆಳೆದ ಕವಿ. ಕಾವ್ಯ ಮಾಧ್ಯಮದಲ್ಲಿ ಅದನ್ನು ಕಲಾತ್ಮಕವಾಗಿ, ಸರಳ ನೇರ ನುಡಿಯಲ್ಲಿ ಹೇಳಿದ ಮೊದಲ ತೆಲುಗು ಕವಿ ಕೂಡಾ. ಸಂಕಲನದ 'ಮಹಾಪ್ರಸ್ಥಾನಂ, ನವಕವಿತ, ಪ್ರತಿಜ್ಞ, ದೇಶ ಚರಿತ್ರಲು, ವ್ಯತ್ಯಾಸಂ' ಈ ಜಾತಿಯ ಕವಿತೆಗಳು. ಇಲ್ಲಿ ಗತಿ ತಾರ್ಕಿಕ ಭೌತಿಕವಾದ, ಶ್ರಮ, ಶಕ್ತಿ, ವರ್ಗ ಸಂಘರ್ಷ, ಕಾರ್ಮಿಕ ಕ್ರಾಂತಿ, ಸಂಘಟನೆ, ಹೇತುವಾದ ಮುಂತಾದ ಸಾಮ್ಯವಾದದ ಪ್ರಧಾನ ಲಕ್ಷಣ, ಸೂತ್ರಗಳಿಗೆ ತಕ್ಕ ಘೋಷಣೆಗಳಂತಹ ಕಾವ್ಯಾತ್ಮಕ ಸಾಲುಗಳು ಅನೇಕ. ಉದಾಹರಣೆಗೆ :

"ನನ್ನೊಳು ಹುಟ್ಟುವ ನವ್ಯಕವಿತ್ವ
ಕಾರ್ಮಿಕ ಲೋಕದ ಕಲ್ಯಾಣಕ್ಕೆ/ಶ್ರಮಿಕ ಲೋಕದ ಕಲ್ಯಾಣಕ್ಕೆ (ಪ್ರತಿಜ್ಞ)
"ನೈಲುನದಿ ನಾಗರಿಕತೆಯಲಿ/ಸಾಮಾನ್ಯನ ಜೀವನವೆಂಥದು
ತಾಜಮಹಲಿನ ನಿರ್ಮಾಣಕ್ಕೆ/ಕಲ್ಲನು ಹೊತ್ತ ಕೂಲಿಯಾರು ?"
(ದೇಶ ಚರಿತ್ರಲು)

"ಶ್ರಮಂ ನಮ್ಮ ಬದುಕು/ಚಳುವಳಿ ಉಸಿರು
ಬಂಡಾಯವೆ ನಮ್ಮ ವೇದಾಂತ" (ವ್ಯತ್ಯಾಸಂ)

ಶ್ರೀಶ್ರೀ ಆಧುನಿಕಾಂಧ್ರ ಕಾವ್ಯ ಜಗತ್ತಿನಲ್ಲಿ ಕೇವಲ 'ಮಹಾಪ್ರಸ್ಥಾನಂ' ಕೃತಿಯೊಂದರಿಂದಲೇ ಮಹಾಕವಿಯಾಗಿ—ತನ್ನೆಲ್ಲ ಗುಣದೋಷ, ದೌರ್ಬಲ್ಯಗಳನ್ನು ಮರೆ ಮಾಡುವಷ್ಟು—Image ಸೃಷ್ಟಿಸಿಕೊಂಡಾತ. ವಸ್ತು ಸ್ಥಿತಿಗೆ ಸ್ಪಂದಿಸುವ ಮಾರ್ಕ್ಸಿಸಂಗೆ ಪಕ್ಕಾದ ಬಂಡಾಯಗಾರ ಕವಿ.

ಕನ್ನಡದ ಬೇಂದ್ರೆಯಂತೆಯೇ ಶ್ರೀಶ್ರೀ ನುಡಿಗಾರುಡಿಗ. ಕವಿತಾ ಚಮತ್ಕಾರವೂ ಅಷ್ಟೆ. ಶ್ರೀಶ್ರೀ ಶೈಲಿ ಶಬ್ದ ಪ್ರಧಾನವಾದುದು—ಪ್ರಾಸ, ಅನುಪ್ರಾಸಗಳು ಪಥ

ಚಲನೆಯಲ್ಲಿರುವ ಪೃಥ್ವಿಯಂತೆ ಕವಿ ಹೃದಯದಲ್ಲಿ ತಿರುಗುತ್ತಿರುವಂತೆ ಭಾಸವಾಗುತ್ತದೆ. ಪದಬಂಧ, ಕಾವ್ಯದ ನಡಿಗೆ ಭಾಷೆಯ ಬಳಕೆಯಲ್ಲಿ ಆತನ ಚಮತ್ಕಾರದ ಆಟ ಬೆರಗು ಹುಟ್ಟಿಸುವಂಥದು. ಇಂಥದರ ಪ್ರಕ್ರಿಯೆಯ ಪ್ರಕ್ರಮ ಮಹಾಪ್ರಸ್ಥಾನಂಗಿಂತಲೂ ಇತರ ಕೃತಿಗಳಲ್ಲಿ ಹೆಚ್ಚಿಗೆ ರೂಪುತಾಳುತ್ತವೆ. ಉದಾಹರಣೆಗೆ ಕೆಲವು—

"ಧಾರುಣ ಮಾರಣ, ದಾನವ ಭಾಷೆಗಳು
ಘೇರವ, ಭೈರವ, ಭೀಕರ ಘೋಷಗಳು" (ಕೇಕ)

"ಬದುಕು ವೃಥಾ, ಓದು ವೃಥಾ/ಕವಿತೆ ವೃಥಾ, ವೃಥಾ, ವೃಥಾ
....ಹಿಂದೆ ದಗಾ, ಮುಂದೆ ದಗಾ/ಎಡ ಬಲದಲಿ ದಗಾ ದಗಾ
(ಚೇದುಪಾಟ)

"ಗಿರಗಿರಗಿರಾ/ಭ್ರಮರ/ಗಿರಾ ಭ್ರಮಣ
ಭ್ರಮೆ/ಭ್ರಮಣ/ಭ್ರಮಣ ಭ್ರಮರ"
"ರಣ/ಮರಣ
ರಣ ಮರಣ ದಾರುಣ ಹನನ" (ಖಡ್ಗಸೃಷ್ಟಿ—ಭ್ರಮರಗೀತೆ)

## ಖಡ್ಗಸೃಷ್ಟಿಯಿಂದ ಮುಂದಕ್ಕೆ

'ಮಹಾಪ್ರಸ್ಥಾನಂ' ನಂತರ ಶ್ರೀಶ್ರೀ ಸೃಷ್ಟಿಸಿದ್ದು ಅಸಂಖ್ಯ. ಅವುಗಳಲ್ಲಿ 'ಖಡ್ಗಸೃಷ್ಟಿ (ಕಾವ್ಯ), ಚರಮರಾತ್ರಿ (ಕಥಾ ಸಂಕಲನ), ಮೂಡುಯಾಭೈಲು (ರೂಪಕ–ನಾಟಕಗಳು), ಮರೋಪ್ರಸ್ಥಾನಂ (ಕಾವ್ಯ)' ಮುಖ್ಯವಾದುವುಗಳು.

'ಮಹಾ ಪ್ರಸ್ಥಾನಂ'ಗೂ 'ಖಡ್ಗಸೃಷ್ಟಿ'ಗೂ ಒಂದು ಪ್ರಧಾನ ಭೇದವಿದೆ. ಮಹಾ ಪ್ರಸ್ಥಾನಂದು ಮಳೆಗಾಲದ ಜಲಪಾತದ ಓಘ, ಆವೇಗ, ನಡಿಗೆ. ಖಡ್ಗಸೃಷ್ಟಿಯದು ಶಾಂತ, ಬಿರುಸಿನ ನಡಿಗೆಯುಳ್ಳ, ಅಂತರ್ಯದಲ್ಲಿ ಪ್ರಭಲ 'ಸೆಳು'ವಿರುವ ನದಿ ಹರಹು.

"ಇದು
ಸಮಾನ ಧರ್ಮವನ್ನು ಸ್ಥಾಪಿಸುತ್ತದೆ
ನವೀನ ಮಾರ್ಗವನ್ನು ತೋರಿಸುತ್ತದೆ." (ಖಡ್ಗಸೃಷ್ಟಿ)

ಹೀಗೆ 'ಖಡ್ಗಸೃಷ್ಟಿ' ಸಂಕಲನದ ಇತರ ಕವಿತೆಗಳೂ ಬೋಧಕ ಅಭಿಪ್ರಾಯಗಳನ್ನು ಆವೇಶದಿಂದ ದೂರಾಗಿ, ಮಾನಸದ ಮೇಲೆ ಮುದ್ರೆಯೊತ್ತಲು ಪ್ರಯತ್ನಿಸು

ತ್ತವೆ ಆದರೂ ಜನಮನ ಮುಟ್ಟಿದ 'ಮಹಾಪ್ರಸ್ಥಾನಂ' ಕೃತಿಯೇ ಖಡ್ಗಸೃಷ್ಟಿಗಿಂತಲೂ ಮಹತ್ವದ ಕೃತಿಯೆಂದು ಗುರುತಿಸಲಾಗುತ್ತದೆ.

ಕಾವ್ಯ ಉದ್ದೇಶ ಸಿದ್ಧಿಯನ್ನು ಸಾಧಿಸಬೇಕೆಂಬ ಅತಿ ಎಚ್ಚರ, ಹೇಳುವುದನ್ನು ನೇರವಾಗಿ ಹೇಳಬೇಕೆಂಬ ತುಮುಲದಿಂದಾಗಿ ಒಮ್ಮೊಮ್ಮೆ ಮಾತಂಗಳಾಗಿಬಿಟ್ಟಿದೆ ಕಾವ್ಯ :

"ಹೇಳುವುದನ್ನು ನೇರವಾಗಿ/ಮೇಜು ಗುದ್ದಿದಂತೆ
ಮಡಕೆ ಒಡೆದಂತೆ" (ಶರಚ್ಚಂದ್ರಿಕ)

'ಖಡ್ಗಸೃಷ್ಟಿ'ಯಲ್ಲಿನ ಭಾವಗಳು ಭವಿಷ್ಯತ್ತಿನತ್ತ ಬೆರಳು ತೋರಿಸುತ್ತವೆ. ಇದೇ ಖಡ್ಗಸೃಷ್ಟಿಯ ಮಹಾ ಲಕ್ಷಣ.

ಉದಾಹರಣೆಗೆ—

"ಎಷ್ಟೇ ದೂರ ದೂರವಿದ್ದರೂ/ಮೇಲದೆಷ್ಟೆ ಭೇದವಿದ್ದರೂ
.............................
ಅಂತರಂಗದ ಆಳದಲ್ಲಿ ಮಾತ್ರ
ಎಲ್ಲ ಜನರು ಮಾನವರೆ" (ಶರಚ್ಚಂದ್ರಿಕ)

ವ್ಯಕ್ತಿ—ವ್ಯಕ್ತಿ, ಜಾತಿ—ಜಾತಿ, ಧರ್ಮ—ಧರ್ಮಗಳ ನಡುವೆ ಗಿರಿಗಳೋಪಾದಿಯಲ್ಲಿ ಭೇದ ಬೆಳೆದು ನಿಂತಿರುವ ಈ ಸಮಯದಲ್ಲಿ ಸಕಲ ಮಾನವ ಸಮಾನತೆಯನ್ನು, ಮಾನವೀಯತೆಯ ಮೂಲ ಸೆಲೆಯೊಂದರ ಅಸ್ತಿತ್ವವನ್ನು ಬೆಟ್ಟುಟ್ಟು ತೋರಿಸುತ್ತವೆ ಈ ಸಾಲುಗಳು.

ನೀತಿ, ಧರ್ಮ ಶಾಶ್ವತವೆಂದು, ಶಾಸ್ತ್ರ ನಿಬಂಧವೆಂದು ವಿಶ್ವಾಸತಳೆಯುವುದು ಪ್ರಾಚೀನತೆ. ಆದರೆ ದೇಶ ಕಾಲವನ್ನುಸರಿಸಿ ಬದಲಾಗುವ ನೀತಿ ನ್ಯಾಯಗಳು ಸಂದರ್ಭಾನುಸಾರ ಚರ್ಚಾಸ್ಪದವಾದುವು ಇದ್ದರೂ 'ಸಾಮಾಜಿಕ,ಸಾಮೂಹಿಕ ಸದ್ವರ್ತನೆ'ಯನ್ನು ನೀತಿಯಲ್ಲವೆಂದು ಊಹಿಸಲು ಆಗದು. ಇದನ್ನು ಕವಿ ತಿಳಿದಿದ್ದಾನೆ—

"ಯಾರಿಗೆ ತೋಚಿದ ಅರ್ಥವನವರು/ಹಚ್ಚುವ ಪಡಿಪಾಟಲು ತಪ್ಪದು
ಪರಮಾರ್ಥವು ಸಾಮಾಜಿಕ/ಸಾಮೂಹಿಕ ಸದ್ವರ್ತನ" (ಸದಸತ್ಸಂಶಯಂ)

ಹೀಗೆ 'ಖಡ್ಗಸೃಷ್ಟಿ'ಯಲ್ಲಿನ ರಚನೆಗಳು ಒಂದು ಗಟ್ಟಿ ನೆಲೆಗಟ್ಟನ್ನು ಹಿಡಿಯಲು ಪ್ರಯತ್ನಿಸುತ್ತವೆ.

ಸಂಕಲನದಲ್ಲಿ ಜಗತ್ತಿನ ವಿವಿಧ ಭಾಗದ ಕವಿಗಳ ಸುಮಾರು ೨೨ ಕವಿತೆಗಳ ಅನುವಾದವಿದೆ. ಈ ಕವಿತೆಗಳು ಶ್ರೀಶ್ರೀ ಉತ್ತಮ ಅನುವಾದಕ ಕೂಡಾ ಎಂಬುದಕ್ಕೆ ಪುರಾವೆಗಳಾಗಿ ನಿಲ್ಲುತ್ತವೆ.

# ಇತಿಹಾಸವಾದ ಶ್ರೀಶ್ರೀ

'ಕರ್ಷಕ ವೀರರ ಕಾಯ ತುಂಬ
ಕಾಲುವೆ ಕಟ್ಟುವ ಘರ್ಮ ಜಲಕ್ಕೆ
ಧರ್ಮ ಜಲಕ್ಕೆ/....ಬೆಲೆಯೆ ಇಲ್ಲ (ಪ್ರತಿಜ್ಞ)

ಎಂದು ಶ್ರಮಿಕ ಜೀವನ ಕಲ್ಯಾಣಕ್ಕಾಗಿ, ಸಾಮಾನ್ಯನ ಬದುಕಿಗೆ ಕಾವ್ಯಮಾಧ್ಯಮದಲ್ಲಿ ಸ್ಥಾನ ದೊರಕಿಸಿಕೊಟ್ಟು, ಆರ್ಥ ಬದುಕಿನ ಯಥಾರ್ಥ ದೃಶ್ಯಗಳಿಂದ ಬಡತನ ಬದುಕನ್ನು ಕಾವ್ಯವಾಗಿಸಿದ ಸಮತಾ—ಮಾನವತಾ—ವಾದಿ ಕವಿ

ಚಿತ್ರರಂಗದ ಬದುಕಿನಲ್ಲಿ—ತನ್ನ ಬದುಕಿಗಾಗಿ—ಒಬ್ಬ ಕಮ್ಯೂನಿಸ್ಟನಾಗಿ ಏನನ್ನು ಬರೆಯಬಾರದಿತ್ತೋ ಅದನ್ನು ಬರೆದು. ತುರ್ತುಪರಿಸ್ಥಿತಿಯ ಕಾಲದ ಪ್ರಣಾಳಿಕೆಯನ್ನು ಹೊಗಳಿ ರೇಡಿಯೋಗಾಗಿ ಹಾಡು ಬರೆದು ವಿವಾದ ಕೇಂದ್ರವಾದ ಶ್ರೀಶ್ರೀ ತನ್ನ ಮೇಲಿದ್ದ ಟೀಕೆಗಳಿಗೆ ಟಿಪ್ಪಣಿ ಬರೆದದ್ದು ಅನೇಕ ವರ್ಷಗಳ ನಂತರ. ಅದೂ ಆದರೂ ಅಲ್ಲಿನ ಕಮ್ಯುನಿಷ್ಟರು ಇದನ್ನೆಲ್ಲ ಸಹಿಸಿಕೊಂಡಿದ್ದು, 'ಮಹಾಪ್ರಸ್ಥಾನಂ' ತಂದುಕೊಟ್ಟ Hero Imageಗೆ ಯಾವ ಧಕ್ಕೆಯೂ ಉಂಟಾಗದದ್ದು ಆಶ್ಚರ್ಯದ ಸಂಗತಿಯಾಗಿ ಇಂದಿಗೂ ಉಳಿದಿದೆ.

ಮಹಾಕವಿಯಾಗಿ ಐದು ದಶಕಗಳಿಗೂ ಮಿಕ್ಕಿ ಕಾವ್ಯ ಚಿತ್ರರಂಗಗಳೆರಡರಲ್ಲೂ ತನ್ನದೇ ಛಾಪು ಛಾಪಿಸಿಕೊಂಡು ಮೆರೆದ ಶ್ರೀಶ್ರೀ, ನಿತ್ಯ ಬದುಕಿಗೆ ಪ್ರಾಮಾಣಿಕವಾಗಿ ತನ್ನನ್ನು ಒಪ್ಪಿಸಿಕೊಂಡು—

"ಸ್ವಾತಂತ್ರ್ಯ ಸಮಭಾವ
ಭ್ರಾತೃತ್ವ ಸೌಹಾರ್ದ
ಪಾಯವಾಗಿ ಮನೆಗಳೆದ್ದು
ಜನಾಂಗಕ್ಕೆ ಶುಭವಾಗೆ
ಶಾಂತಿ ಶಾಂತಿ ಶಾಂತಿ ಶಾಂತಿ"

ಎಂದು ದನಿ ತೆಗೆದು ಬದುಕಿನುದ್ದಾ ಹಾಡುತ್ತ ಬಂದ ಶ್ರೀಶ್ರೀ ೧೫.೬.೮೩ರಂದು ತನ್ನಲ್ಲೋ ತನ್ನನ್ನು ಹುಡುಕಿಕೊಳ್ಳುತ್ತ ಮರಳಿ ಬರಲಾಗದ ದೂರಕ್ಕೆ ಹೊರಟು ಹೋದರೂ ಮಾನವಾಭ್ಯುದಯದ ಹೋರಾಟದ ಪ್ರತಿ ಸಂದರ್ಭದುದ್ದಕ್ಕೂ ಪ್ರಸ್ತುತವಾಗಿದ್ದಾರೆ.

(ಟಿಕೆ : ಎಷ್ಟೇ ಪ್ರಯತ್ನಪಟ್ಟರೂ 'ಮರೋ ಪ್ರಸ್ಥಾನಂ' ಕೃತಿ ಅಲಭ್ಯವಾದುದರಿಂದ ಲೇಖನದಲ್ಲಿ ಅದರ ಪ್ರಸ್ತಾಪ ಮಾತ್ರ ಸಾಧ್ಯವಾಯಿತು. ಈ ಬಗ್ಗೆ ವಿಷಾದವಿದೆ. ಶ್ರೀಶ್ರೀಯವರ 75ನೇ ವರ್ಷದ ಸವಿನೆನಪಿಗಾಗಿ ಈ ಲೇಖನ.)

# ತಗಳಿ ಶಿವಶಂಕರ ಪಿಳ್ಳೈ

—ಹಾ. ಸಾ. ಕೃ.

ತಗಳಿ ಶಿವಶಂಕರ ಪಿಳ್ಳೈಯವರು ಮಲೆಯಾಳಂ ಭಾಷೆಯಲ್ಲಿ ಇಂದು ಬರೆಯುತ್ತಿರುವ ಮಹತ್ವದ ಲೇಖಕರಲ್ಲೊಬ್ಬರು. ಹಾಗೆ ನೋಡಿದರೆ ಭಾರತೀಯ ಹಿರಿಯ ಲೇಖಕರ ಗುಂಪಿಗೆ ಸೇರತಕ್ಕಂತಹವರು. ಇವರನ್ನು ಇತ್ತೀಚೆಗೆ ಹಾ ಸಾ. ಕೃ. ಕಂಡು ಚರ್ಚಿಸಿದ ಅರ್ಥಪೂರ್ಣ ಮಾತುಗಳು ಇಲ್ಲಿವೆ. ಕನ್ನಡ ಸಾಹಿತ್ಯ ಅಕಾಡೆಮಿಯ ಮೂಲಕ ಈ ಅವಕಾಶವನ್ನು ಹಾ. ಸಾ. ಕೃ. ಪಡೆದಿದ್ದರು.

ಕೇರಳದಲ್ಲಿ ಸಂಸತ್ತಿಗೆ ಚುನಾವಣೆ ಘೋಷಿತವಾಗುವುದಕ್ಕೆ ಮುಂಚೆ ಅತಿಹೆಚ್ಚಿನ ಚರ್ಚಿತ ವಿಷಯಗಳೆಂದರೆ, ತಗಳಿ ಶಿವಶಂಕರ ಪಿಳ್ಳೈಯವರ ಇತ್ತೀಚಿನ ಮಹತ್ವಪೂರ್ಣ ಕಾದಂಬರಿ ಖಯ್ಯಾರ್ (ಹಗ್ಗ) ಮತ್ತು ಅಡೂರ ಗೋಪಾಲಕೃಷ್ಣನ್‌ರವರ ಹೊಸ ಚಿತ್ರ ಮುಖಾಮುಖಿ.

ತಗಳಿಯವರೇ ಹೇಳುವಂತೆ ಇಡೀ ಕೇರಳವೇ ಒಂದು ದೊಡ್ಡ ಹಳ್ಳಿ. ಆ ಹಳ್ಳಿಯ ಮಧ್ಯೆ ಒಂದು ಪುಟ್ಟ ಸುಂದರ ದ್ವೀಪದಂತಿರುವ ತಗಳಿ ಅವರ ಹುಟ್ಟೂರು. ಅದು ಈಗ ಜಗತ್ಪ್ರಸಿದ್ಧ—ತಗಳಿಯವರ ಕೃತಿಗಳಿಂದ. ಅಲ್ಲಿನ ಜನ, ಅವರ ಬದುಕು—ಬದಲಾವಣೆಗಳೇ ಲೇಖಕರ ಕೃತಿಗಳಿಗೆ ಮೂಲವಸ್ತು. ಚೆಮ್ಮೀನ್, ಎರಡು ಬಳ್ಳ, ಏಣಿ ಮೆಟ್ಟಿಲುಗಳು (ಇವೆಲ್ಲ ಕನ್ನಡಕ್ಕೆ ಭಾಷಾಂತರವಾಗಿವೆ), ಹಾಗೂ ಈಚಿನ ಖಯ್ಯಾರ್ ಕಾದಂಬರಿಗಳು ಲೇಖಕರಿಗೆ ಅಂತರಾಷ್ಟ್ರೀಯ ಖ್ಯಾತಿಯನ್ನು ತಂದು ಕೊಟ್ಟಿವೆ. 'ಎರಡು ಬಳ್ಳ', ಇಂಗ್ಲಿಷ್, ರಷ್ಯನ್, ರುಮೇನಿಯನ್, ಚೈನೀಸ್, ಜೆಕ್ ಮುಂತಾದ ಭಾಷೆಗಳಿಗೆ ಅನುವಾದವಾಗಿದ್ದರೆ ಚೆಮ್ಮೀನ್ ಫ್ರೆಂಚ್, ಜರ್ಮನ್, ಇಟಾಲಿಯನ್, ಸ್ಪಾನಿಷ್, ಡಚ್, ಜೆಕ್, ಸ್ಲಾವ್, ಪೋಲಿಷ್, ಹಂಗೇರಿಯನ್,

ಹಾ. ಸಾ. ಕೃ., 12/4, 'ಲಕ್ಷ್ಮೀನಿಲಯ', ಆಂಜನೇಯ ದೇವಸ್ಥಾನ, ಎರಡನೇ ರಸ್ತೆ, ಶೇಷಾದ್ರಿಪುರಂ, ಬೆಂಗಳೂರು – 20

ಕ್ರೋಷಿಯನ್, ಅರಾಬಿಕ್, ವಿಯಟ್ನಾಮೀಸ್, ಸಿಂಘಲೀಸ್ ಹೀಗೆ ಹಲವು ಭಾಷೆಗಳಿಗೆ ಭಾಷಾಂತರವಾಗಿದ್ದು, ತಗಳಿ, ಇಡೀ ವಿಶ್ವದಲ್ಲೇ ಅತಿ ಹೆಚ್ಚಿನ ಭಾಷಾಂತರಗಳನ್ನು ಕಂಡ ಲೇಖಕರೆನಿಸಿದ್ದಾರೆ. ಹಾಗೆಯೇ ಹಲವಾರು ಅಕಾಡೆಮಿ ಪ್ರಶಸ್ತಿಗಳನ್ನು ಲೇಖಕರು ಗಳಿಸಿದ್ದಾರೆ.

ಅವರ ಸಂದರ್ಶನ ಮಾಡಲು ತಗಳಿಯವರ ಮನೆ ಮುಟ್ಟಿದಾಗ ಮಧ್ಯಾಹ್ನ ಎರಡು ಗಂಟೆಯಾಗಿತ್ತು. ಅವರನ್ನು ಕಾಣುತ್ತಿದ್ದಂತೆಯೇ..."ನಿಮ್ಮ ಊಟ ಆಗಿದೆಯೇ, ಬನ್ನಿ, ಊಟಮಾಡಿ" ಎಂದು ಹಳ್ಳಿಯವರಿಗೆ ಸಹಜವಾದ ಸೌಜನ್ಯದ ಕರೆಕೊಟ್ಟರು. ಊಟ ಖಂಡಿತ ಆಗಿದೆಯೆಂದು ತಿಳಿಸಿದಾಗ ವೆರಾಂಡಕ್ಕೆ ತಮ್ಮ ಎಲೆ ಅಡಿಕೆ ಪೆಟ್ಟಿಗೆಯ ಸಮೇತ ಬಂದು ಮಾತಿಗೆ ಕೂತರು. ವಯಸ್ಸು 73ನ್ನು ದಾಟಿದ್ದರೂ ತೆಳ್ಳಗೆ ನೀಳವಾಗಿರುವ ಅವರ ಶರೀರ ಇನ್ನೂ ಕುಗ್ಗಿಲ್ಲ; ಬಣ್ಣದಲ್ಲಿ ಸ್ವಲ್ಪ ಕಪ್ಪೆನಿಸಿದರೂ ಅವರ ಹೊಳಪಿನ ಕಣ್ಣು, ತುಟಿಯಲ್ಲಿ ಮಿನುಗುವ ಸಣ್ಣ ನಗು ಅವರ ಬಳಿ ಸೆಳೆಯುವಂತೆ ಮಾಡುತ್ತವೆ.

ನನ್ನದು ಯಾವ ಊರು' ಎಂದು ಕೇಳಿ ತಿಳಿಯುತ್ತಿದ್ದಂತೆಯೇ ಮಾಸ್ತಿ ಮತ್ತು ಕಾರಂತರನ್ನು ಹೇಗಿದ್ದಾರೆ ಎಂದು ವಿಚಾರಿಸಿಕೊಂಡರು; ಶ್ರೀರಂಗರನ್ನು ಸ್ಮರಿಸಿದರು. ಕೇಂದ್ರ ಅಕಾಡೆಮಿಯ ಸಮಿತಿಯೊಂದರಲ್ಲಿ ತಾವೂ ಶ್ರೀರಂಗರೂ ಒಟ್ಟಿಗೆ ಸೇರುತ್ತಿದ್ದುದನ್ನು ಜ್ಞಾಪಿಸಿಕೊಂಡರು.

ತಗಳಿಯವರ ಉಡುಪೆಂದರೆ ಯಾವ ಅಂಗವಸ್ತ್ರವೂ ಇಲ್ಲದೆ ನಡುವಿನವರೆಗೂ ಕಟ್ಟಿದ್ದ ಪಂಚೆಯೊಂದೇ. ಸ್ಥಳದ ಸಾಮಾನ್ಯ ರೈತನೊಬ್ಬನಂತೆ, "ನಾನು ಹುಟ್ಟಾ ರೈತ—ನಮ್ಮದು ರೈತವಂಶ" ಅಭಿಮಾನದಿಂದ ಹೇಳಿಕೊಂಡರು. "ನೋಡಿ ಈ ಬೀದಿಯಾಚೆಗೆ (ತಗಳಿಯವರ ಮನೆಯಿರುವುದು ಮುಖ್ಯರಸ್ತೆಯ ಬದಿಗೆ) ನನ್ನ ತಾಯಿಯ ಮನೆ ಹಾಗೂ ಆಕೆಗೆ ಸೇರಿದ ಜಮೀನಿತ್ತು. ನಮ್ಮದು ಮಾತೃ ಪ್ರಧಾನವಾದ ವಂಶ. ಈಗ ನಮ್ಮ ಮನೆ ಇರುವೆಡೆ ಒಂದು ಕಾಲುವೆ ಇತ್ತು. ನಿಶ್ಶಬ್ದ ನೀರವತೆ ನೆಲಸಿದ್ದ ಕಾಲ. ಈಗ ಈ ಎಡೆಬಿಡದ ಶಬ್ದ....ಹೂಂ...ಔದ್ಯೋಗಿಕರಣದ ಹಾವಳಿ ಎಲ್ಲೆಲ್ಲೂ ಇದ್ದದ್ದೇ—ಕಾಡೆಲ್ಲ ನಿರ್ನಾಮವಾಗಿರುವುದರಿಂದ ಕಾಡಿಗೂ ಓಡಿಹೋಗುವ ಹಾಗಿಲ್ಲ. ನಾನೊಮ್ಮೆ ಗಿರ್ ಅರಣ್ಯಧಾಮಕ್ಕೆ ಹೋಗಿದ್ದೆ. ಅಲ್ಲಿ ಹುಲಿಗಳು ನಿಮ್ಮನ್ನು ಹೇಗೆ ನೋಡುತ್ತೆ ಗೊತ್ತೆ ? ದಿಟ್ಟಿಸುವಂತೆ ! ಕಾಡಿನ ಹುಲಿಗಳಂತೆ ಭಾಕ್ ಎಂದು ಓಡಿಹೋಗುವುದಿಲ್ಲ. ಇದೆಲ್ಲ ದಿನನಿತ್ಯದ ವ್ಯವಹಾರವೆಂಬಂತೆ ನಿಮ್ಮತ್ತ ಪರಿಚಯದ ನೋಟ ಬೀರುತ್ತವೆ ! ಅವು ನಿಜಕ್ಕೂ ಕಾಡಿನ ಹುಲಿಗಳಲ್ಲ, ಅವು ಅರ್ಬನೈಸ್ಡ್ ಟೈಗರ್ಸ್ ! ಅರಣ್ಯಧಾಮ ಕೂಡ ನಗರೀಕೃತ

ಕಾಡು !..." ಎಂದು ನಿರರ್ಗಳವಾಗಿ ಮಾತನಾಡಿದ ತಗಳಿಯವರು ಕೊನೆಯಲ್ಲಿ ತುಂಟನಗು ನಕ್ಕಿದ್ದರು.

"ಸಾರ್, ನಿಮ್ಮ ಖಯ್ಯಾರ್ ಕಾದಂಬರಿ ಬಗ್ಗೆ ಬಹಳಷ್ಟು ಪ್ರಶಂಸೆಗಳನ್ನು ಕೇಳುತ್ತಿದ್ದೇನೆ."

"ಹೌದು, ಎಲ್ಲರೂ ಅದರ ಬಗ್ಗೆ ಮಾತನಾಡುತ್ತಿದ್ದಾರೆ. 81ರಲ್ಲಿ ಅದು ಹೊರಗೆ ಬಂದದ್ದು. ಆದರೆ 83ರಲ್ಲಿ ಎರಡು ಆವೃತ್ತಿಗಳು ಹೊರಬಂದು, ನೂರು ರೂಪಾಯಿನ ದುಬಾರಿ ಬೆಲೆ ಇದ್ದರೂ (ಸುಮಾರು ಸಾವಿರ ಪುಟಗಳ ಕಾದಂಬರಿ) ಚೆನ್ನಾಗಿ ಮಾರಾಟವಾಗಿದೆ."

"ಯುನೆಸ್ಕೋದವರು ತರ್ಜುಮೆಗೆ ಕೇಳಿದ್ದಾರಂತೆ ?"

"ಹೌದು—ನಿಮಗೆ ಯಾರು ಹೇಳಿದರು ?....ಕಾದಂಬರಿ ಸಮಾಜಶಾಸ್ತ್ರದ ದೃಷ್ಟಿಯಿಂದ ಉಪಯೋಗಕರವಾದುದರಿಂದ, ಯಾರೋ ಆಸಕ್ತಿ ವಹಿಸಿರಬೇಕು. ಆದರೆ ಈಗ ಅಮೆರಿಕಾ ಯುನೆಸ್ಕೋದಿಂದ ನಿರ್ಗಮಿಸುತ್ತಿರುವುದರಿಂದ ಏನಾಗುತ್ತದೋ ನೋಡಬೇಕು."

"ಸ್ವಲ್ಪ ಕಾದಂಬರಿ ಬಗ್ಗೆ ಹೇಳುತ್ತೀರಾ ?"

"ನೋಡಿ ಕಾದಂಬರಿ ಇಲ್ಲಿನ ಜನಜೀವನದ ಚರಿತ್ರೆ. ನೂರರಿಂದ ನೂರೈವತ್ತು ವರುಷದ ಜೀವನದ ಚರಿತ್ರೆಯನ್ನೂ ಹೇಳಿದ್ದೇನೆ. ಭೂಮಿಯ ಹಕ್ಕಿಗೆ ಸಂಬಂಧಪಟ್ಟಂತೆ ಕಾಯಿದೆಯಲ್ಲಿನ ಬದಲಾವಣೆಗಳು, ಆ ಬದಲಾವಣೆಗಳು ಜನತೆಯ ಸಾಮಾಜಿಕ—ಆರ್ಥಿಕ ರಾಜಕೀಯ ಜೀವನದಲ್ಲಿ ತಂದ ಏರುಪೇರುಗಳು, ಮಾರ್ಪಾಡುಗಳು, ಅವರ ಕೌಟುಂಬಿಕ ಜೀವನದ ಮೇಲೆ, ಆಚಾರ—ವ್ಯವಹಾರಗಳ ಮೇಲೆ ಆದ ಪರಿಣಾಮ. ತತ್ಫಲವಾಗಿ ಅವರು ದೇವರು, ಧರ್ಮ, ನಂಬಿಕೆ, ಸಂಪ್ರದಾಯ, ಪ್ರೇಮ-ಪ್ರೀತಿ ಇವುಗಳಲ್ಲಿ ಮೂಡಿದ ಹೊಸ ನೋಟಗಳು, ಆವಿಷ್ಕಾರಗಳು ಹೀಗೆ ನಾನು ಕಳೆದ ನೂರೈವತ್ತು ವರುಷದಲ್ಲಿ ನನ್ನ ಜನರ ಜೀವನದಲ್ಲಾದ ಬದಲಾವಣೆಯ ಸಮಗ್ರ ಚಿತ್ರವನ್ನು ಕೊಟ್ಟಿದ್ದೇನೆ. ಎಲ್ಲಕ್ಕೂ ಭೂಮಿಯೇ ತಳಹದಿ. ಭೂಮಿಯ ಬಗ್ಗೆ ನನ್ನ ಜನರಿಗಿರುವ ಪ್ರೀತಿಯೇ ಅದರ ಸೆಲೆ. Evolution ನನ್ನ ಕಥಾವಸ್ತು. ಒಂದು ಬಗೆಯ ಸಮಾಜಶಾಸ್ತ್ರ...."

ತಗಳಿಯವರು ತಮ್ಮ ಕಾದಂಬರಿ ಬಗ್ಗೆ ಮಾತಿಗಾರಂಭಿಸಿದ್ದೇ ತಡ, ಭಾವುಕರಾದ ಹಾಗೆ ಹೇಳುತ್ತ ಹೋದರು.

"ಇಲ್ಲಿ ಭೂಮಿ ಕಾಯ್ದೆಯಲ್ಲಿ ಮೊಟ್ಟ ಮೊದಲನೆ ಬದಲಾವಣೆ, ಸ್ವಾತಿ ತಿರುನಾಳ್ ಮಹಾರಾಜರ ಕಾಲದಲ್ಲಾಗಿದ್ದು ನೂರು ವರ್ಷಗಳಿಗೂ ಹಿಂದೆ..."ಎಂದ ತಗಳಿ, ಮಾಪಿಳ್ಳೆ, ಬಂಡಾಯ, ಕಮ್ಯೂನಿಸ್ಟ್ ಆಂದೋಳನ, ಎಲ್ಲವನ್ನೂ ಮುಟ್ಟಿ ಅದರ ರೂಪರೇಷಗಳನ್ನು ಸ್ಥೂಲವಾಗಿ ವಿವರಿಸಿದರು. ಹಂಚಿಕೆಗೆಂದು ರೈತ ಬೆಳೆಯುತ್ತಿದ್ದ ಬೆಳೆ ಕ್ರಮೇಣ ಮಾರಾಟದ ವಸ್ತುವಾಗಿದ್ದನ್ನು ಒತ್ತಿ ಹೇಳಿದರು.

ಅನಂತರ ಕಾದಂಬರಿಯ ರೂಪಕ್ಕೆ ಬಂದರು.

"ನಾನು ನನ್ನ ಕಾದಂಬರಿಯಲ್ಲಿ ನೂರರಿಂದ ನೂರೈವತ್ತು ಪಾತ್ರಗಳನ್ನು ನಿರ್ವಹಿಸಿದ್ದೇನೆ. ಯಾರೂ ಹೀರೋ ಆಗುವುದಿಲ್ಲ. ಪಾತ್ರಗಳು ಕಾಲ ಬಂದಾಗ ತಮ್ಮ ಪಾತ್ರ ಮಾಡಿ ತೆರಳುತ್ತವೆ. ಕಾದಂಬರಿಕಾರ ಇಲ್ಲಿ ನಿರ್ಲಿಪ್ತ. ಯಾವ ಪಾತ್ರದ ಬಗ್ಗೆಯೂ ವಿಶೇಷವಾಗಿ ಆಸಕ್ತಿ ತಳೆಯುದಿಲ್ಲ. ಅನಾವಶ್ಯಕವಾಗಿ ಬೆಳೆಸುವುದಿಲ್ಲ. ಇಲ್ಲವೇ ಕುಗ್ಗಿಸುವ ಗೋಜಿಗೂ ಹೋಗುವುದಿಲ್ಲ...ಮತ್ತಿನ್ನೇನು ಬೇಕು ನಿಮಗೆ..."

ಎಂದು ನನ್ನನ್ನೇ ಕೆಣಕಿದರು ತಗಳಿ...

"ಗೇಬ್ರಿಯಲ್ ಮಾರ್ಕ್ವೆಸ್ ಬಗ್ಗೆ ನಿಮ್ಮ ಅಭಿಪ್ರಾಯ ಏನು ?"

"ನನಗೆ ಇಷ್ಟವಾಯಿತು. ನೋಡಿ ಇಲ್ಲೇ ಇರೋದು ಸ್ವಾರಸ್ಯ. ಲ್ಯಾಟಿನ್ ಅಮೆರಿಕಾ ಬರಹಗಾರರೇ ಆಗಲಿ, ಆಫ್ರಿಕಾದ ಬರಹಗಾರರೇ ಆಗಲಿ, ಕಾದಂಬರಿಯ ರೂಪಕ್ಕೆ ನಮ್ಮಂತೆ ಪಾಶ್ಚಾತ್ಯರಿಗೆ ದಾಸರಲ್ಲ. ಅದೇ ಅವರ ವಿಶೇಷ ಆಕರ್ಷಣೆ. ನಾವು ಏನೇ ಬರೆಯಲಿ, ವಸ್ತುವಿನ ದೃಷ್ಟಿಯಿಂದ ಅಷ್ಟೇ ಮಹತ್ವವಿರಲಿ, ರೂಪಕ್ಕೆ ಪಾಶ್ಚಾತ್ಯ ಮಾದರಿಯನ್ನು ಅನುಸರಿಸುವುದರಿಂದ, ನಮ್ಮ ಬರವಣಿಗೆಗೆ ಬೆಲೆ ಬರುತ್ತಿಲ್ಲ....ನಾನೂ ಕೂಡ ಎಂಥ ತಪ್ಪು ಮಾಡಿದೆನೆಂದು ಈಗ ಪರಿತಪಿಸುತ್ತಿದ್ದೇನೆ. ನಮ್ಮ ತಂದೆ ತಾತನ ಕಾಲದಲ್ಲಿ ಕಥೆ ಹೇಳುವ ರೀತಿ ಎಷ್ಟು ಚೆನ್ನಿತ್ತೂಂತೀರಿ ! ಸಾಯಂಕಾಲ ಮರದ ಕೆಳಗೆ ರೈತರೆಲ್ಲ ಸೇರಿದಾಗ ಒಬ್ಬೊಬ್ಬ ಒಂದೊಂದು ಘಟನೆಯನ್ನು ವಿವರಿಸುತ್ತಿದ್ದ. ಒಬ್ಬ ಅಂದು ತಾನು ಭೂಮಿ ಉತ್ತಿದ್ದನ್ನೇ ಕಥಾನಕವಾಗಿ ಹೇಳಿದರೆ, ಇನ್ನೊಬ್ಬ ಯಾವುದೋ ಒಂದು ಪ್ರೇಮ ಪ್ರಕರಣವನ್ನು ಕಥೆ ಮಾಡುತ್ತಿದ್ದ. ಪ್ರತಿಯೊಂದು ಅನುಭವವೂ ಜೀವನದ ಒಂದು ತುಣುಕೇ ಸರಿ. ಈ ವೈವಿಧ್ಯಮಯ ಕಥಾನಕವನ್ನು ನಾವು ಅನಾದಾರಣೆ ಮಾಡಿದೆವು; ಬಿಟ್ಟು ಕೊಟ್ಟೆವು. ಆದ್ದರಿಂದ ಇಂದು ನಾವು ಏನೇ ಬರೆಯಲಿ, ವಸ್ತುವಿನ ದೃಷ್ಟಿಯಿಂದ ಭಾರತೀಯವೆನಿಸಿಕೊಳ್ಳುತ್ತದೆಯೇ ಹೊರತು, ತಂತ್ರದ ದೃಷ್ಟಿಯಿಂದ ಕೃತಕವೆನಿಸಿಕೊಂಡಿದೆ. ಭಾರತೀಯವೆನಿಸಿಕೊಂಡ ಕಾದಂಬರಿಯೇ ಇಲ್ಲವೆಂದ ನಾಯಪಾಲ್ ಹೇಳಿದ್ದು ಸರಿ. ನೀವು ಇದನ್ನು ಪತ್ರಿಕೆಗೆ ಬರೆಯಿರಿ..."

"ಈ ದಿಸೆಯಲ್ಲಿ ಖಯ್ಯಾರ್‌ನಲ್ಲಿ ನಿಮ್ಮ ಪ್ರಯತ್ನವೇನು ?"

"ನಾನು ಪ್ರಯತ್ನ ಮಾಡಿದ್ದೇನೆ. ಆದರೆ ಯಶಸ್ವಿಯಾಗಿಲ್ಲ. ಬಹಳ ದಿನಗಳ ರೂಢಿ ನೋಡಿ ಅದು. ಒಮ್ಮೆಗೇ ಕಳಚಿಕೊಳ್ಳುವುದು ಸಾಧ್ಯವಾಗಿಲ್ಲ. ಖಯ್ಯಾರ್‌ನಲ್ಲಿ ಪ್ಲಾಟಂತೂ ಇಲ್ಲ. ಅಷ್ಟರಮಟ್ಟಿಗೆ ನಾನು ಯಶಸ್ವಿ. ನಾನೀಗ ಮತ್ತೊಂದು ಕಾದಂಬರಿ ಬರೆಯುತ್ತಿದ್ದೇನೆ. ಇದರಲ್ಲಿ ಸರ್ವಪ್ರಯತ್ನವನ್ನೂ ಮಾಡುತ್ತೇನೆ...."

ತಗಳಿಯವರು ಆಶ್ವಾಸನೆಯಿತ್ತರು. ಅವರಿತ್ತ ಆಶ್ವಾಸನೆ ಇಳಿವಯಸ್ಸಿನಲ್ಲಿ ಅವರಿಗಿರುವ ಛಲ, ತಂತ್ರ ಶೈಲಿಯಲ್ಲಿ ಭಾರತೀಯವಾದದನ್ನು ಸಂಪಾದಿಸಬೇಕೆನ್ನುವ ಅವರ ಹಠ. ನನ್ನಲ್ಲಿ ಅವರ ಬಗೆಗಿನ ಗೌರವ ಹೆಚ್ಚಿಸಿತು. ಈ ಮುದುಕ ತನ್ನ ಪ್ರಯತ್ನದಲ್ಲಿ ಯಶಸ್ವಿಯಾಗಲಿ ಎಂದು ಬಯಸಿದೆ.

"ಕಡೆಯದಾಗಿ ಒಂದು ಪ್ರಶ್ನೆ...."

"ಕೇಳಿ, ಕೇಳಿ...."

"ಯುವ ಪೀಳಿಗೆಯ ಲೇಖಕರ ಬಗ್ಗೆ ಒಂದೆರಡು ಮಾತು ?"

"ಭವಿಷ್ಯ ಆಶಾದಾಯಕವೆನಿಸಿಲ್ಲ ಎನಿಸುತ್ತದೆ, ನನಗೆ. ನನ್ನ ಕಾಲದ ಬರಹಗಾರರಿಗೆ ಒಂದು ಗುರಿ ಇತ್ತು. ಈಗಿನ ಬರಹಗಾರರಿಗ ಸಮಸ್ಯೆಗಳು ಬಹಳ...ಅಡ್ಡದಾರಿಗಳು ಅನೇಕ. ನಾನು ಅವರನ್ನು ನಿಂದಿಸುವುದಿಲ್ಲ, ಏಕೆಂದರೆ ತಪ್ಪುಗಳು ಅವರನ್ನು ಬೆಳೆಸಿದ ವಿದ್ಯಾಭ್ಯಾಸದ ಕ್ರಮದಲ್ಲೇ ಇದೆ, ಮೊದಲು ಅವರ ಜೀವನ ದೃಷ್ಟಿಯೇ ಬದಲಾಗಬೇಕು, ಅದಾದ ಹೊರತು ಏನೂ ಸಾಧ್ಯವಾಗದು...."

"ಕಮ್ಯೂನಿಸ್ಟ್ ಆಂದೋಳನದ ಬಗ್ಗೆ ಏನನ್ನಾದರೂ ಹೇಳುತ್ತೀರಾ ?"

"ನೋಡಿ ನಮ್ಮ ಕಾಲದಲ್ಲಿ ಕಮ್ಯುನಿಸ್ಟ್ ಆಂದೋಳನ ಎದ್ದುದು ರಾಜಕೀಯ ವಿಚಾರಗಳಿಗಾಗಿ (Political Ideas). ಈಗ ಅದಿರುವುದು ಸಾಮೂಹಿಕ ಚೌಕಾಸಿಗಾಗಿ (Collective Bargaining). ಈ ಅನಿಷ್ಟಗಳೆಲ್ಲ ಬಂದದ್ದು ಸಂಸದೀಯ ಪ್ರಜಾಪ್ರಭುತ್ವವನ್ನು ಒಪ್ಪಿಕೊಂಡಿದ್ದರಿಂದ........"

ತಗಳಿಯವರು ಎಷ್ಟು ಬೇಡವೆಂದರೂ ನನ್ನೊಡನೆ ಬಸ್ ನಿಲ್ದಾಣದವರೆಗೂ ಬಂದು ಬೀಳ್ಕೊಟ್ಟರು. ಬರುವಾಗ ದಾರಿಯಲ್ಲಿ ದಾರಿಹೋಕನೊಬ್ಬ ತಗಳಿಯವರನ್ನು ಒರಟೊರಟಾಗಿ ಕಾಸು ಕೊಡಿ ಎಂದು ಕೇಳಿದ. ಉಟ್ಟ ಪಂಚೆಯಲ್ಲೇ ಬಂದಿದ್ದ ತಗಳಿ, ಜೊತೆಯಲ್ಲಿ ಬರುತ್ತಿದ್ದ ಸ್ನೇಹಿತನಿಂದ ಎರಡು ರೂಪಾಯಿ ಕೇಳಿ ತೆಗೆದು

ಕೊಟ್ಟರು. ದಾರಿಹೋಕ, "ಎರಡು ರೂಪಾಯಿಗೆ ಏನು ಬರುತ್ತೆ, ಊಟ ಕೂಡ ಬರುವುದಿಲ್ಲ, ಕೊಡು ಇನ್ನೂ ಎರಡು ರೂಪಾಯಿ" ಅಂದ. ತಗಳಿಯವರು ಮರು ಮಾತಿಲ್ಲದೆ ಮುನ್ನಡೆದರು. ನಂತರ "ಪಾಪ ಅವನಿಗೆ ಬುದ್ಧಿ ಸ್ಥಿಮಿತವಿಲ್ಲ ಏನು ಮಾಡುವುದು" ಎಂದರು.

ತಗಳಿಯವರ ಕಾದಂಬರಿಯಲ್ಲಿ ಈ ಮನುಷ್ಯ ಈಗಾಗಲೇ ಪಾತ್ರವಾಗಿರಲು ಸಾಕು. ಇಲ್ಲದಿದ್ದರೆ ಅವರ ಮುಂದಿನ ಕಾದಂಬರಿಯಲ್ಲಿ ಅವನ ಬುದ್ಧಿ ಸ್ಥಿಮಿತ ತಪ್ಪಿದುದರ ಹಿನ್ನೆಲೆ ಕಾಣಿಸಿದರೆ ಆಶ್ಚರ್ಯ [illegible] ಇಲ್ಲ. ಏಕೆಂದರೆ ತಗಳಿಯವರು ಇರುವ ಹಳ್ಳಿ ಎಷ್ಟು ಚಿಕ್ಕದ್ದೆಂದರೆ ಅಲ್ಲಿ ಯಾವನೊಬ್ಬನೂ ಪಾತ್ರವಾಗದಿರಲಾರ. ಒಟ್ಟಿನಲ್ಲಿ ಅಷ್ಟು ಚಿಕ್ಕ ಹಳ್ಳಿಯಿಂದ ಬಂದ ಒಬ್ಬ ಲೇಖಕ ವಿಶ್ವವ್ಯಾಪಿಯಾಗುತ್ತಿದ್ದಾನೆಂದರೆ ಯಾರಿಗಾದರೂ ಬೆರಗಾಗದಿರದು.

—o—

ಇತ್ತೀಚೆಗೆ ಮಂಗಳೂರಿನಲ್ಲಿ ಒಂದು ಸಭೆಯಲ್ಲಿ ಲೇಖಕ ಸಾರಾ ಅಬೂಬಕರ್‌ರವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಲು ಅವಕಾಶ ತೊಂದರೆ ಕೊಟ್ಟು ನಾನಾರೀತಿಯ ಮಾನಸಿಕ ಹಿಂಸೆಗೆ ಗುರಿಪಡಿಸಿದ ಮತಾಂಧತೆಯನ್ನು ಶೂದ್ರ ಖಂಡಿಸುತ್ತೆ!

## ತಿಂಗಳ ಕಾವ್ಯ

### ಮಿಡತೆಗಳ ಗುಣ ನಡತೆ

ಮಿಡತೆಗಳನ್ನು ಹಿಡಿತಾ ನೀವೆಲ್ಲರೂ ನೋಡಿದ್ದೀರಿ.
ಚಿಕ್ಕವರಿದ್ದಾಗ ಅವು ಛಕ್ಕನೆ ಮೈಮೇಲೆ ಹಾರಿ
ನಿಮ್ಮನ್ನೆ ಮಿಕಿ ಮಿಕಿ ಕಂಡಾಗ ಹೆದರಿ ಓಡಿದ್ದೀರಿ.
ಧೈರ್ಯವಿದ್ದವರು ಕಡ್ಡಿಪೆಟ್ಟಿಗೆಯಲ್ಲಿ ಹಿಡಿದು
ಕೂಡಿ ಹಾಕಿ 'ಆಹಾ ! ರೇಡಿಯೋ ನೋಡಿ' ಎಂದು ಆಡಿದ್ದೀರಿ.
ಒಂದೊಂದೇ ಕಾಲುಗಳ ಕೀಳುತ್ತಾ ಮೋಜು ಮಾಡಿದ್ದೀರಿ___
ದೊಡ್ಡವರಾದ ನೀವೀಗ ಆ ಎಲ್ಲ ಹುಡುಗಾಟಗಳನ್ನು ಮರೆತು
ಮಿಡತೆಯ ಗುಣ ನಡತೆಯ ಕುರಿತು ಚಿಂತಿಸುವುದೊಳಿತು.

ನಿಸರ್ಗಪ್ರಿಯರಿಗೆ ಸುಂದರವಾಗಿ ತೋರುವ ಈ ಕೀಟ
ಎಲೆ ಹಸುರು, ಕಡು ಹಸುರು, ಹಳದಿ, ಕೆಲವೊಮ್ಮೆ ಕಂದು,
ಬೂದಿ ಇತ್ಯಾದಿ ವಿವಿಧ ಬಣ್ಣಗಳಲ್ಲಿ ಕಾಣಿಸಿಕೊಳ್ಳುವುದು,
ಹಸುರು ಪೈರಿನ ಜತೆ ಹಸುರು, ಒಣಗಿದ್ದರೆ ಕಂದು ಮಿಡತೆ;
ಅವುಗಳ ವರ್ಣವಿನ್ಯಾಸ ಪರಿಸರಕ್ಕೆ ಹೊಂದಿಕೊಂಡಿರುತ್ತೆ.
ಚುಕ್ಕೆ ಚುಕ್ಕೆ, ಪಟ್ಟೆ ಪಟ್ಟೆ ಸೂರ್ಯನ ಕುದುರೆ ಮೈಮಾಟ,
ಮೋಹಕ ಭಂಗಿಗಳ ಪ್ರಣಯದಾಟ ಸೆರೆ ಹಿಡಿಯಲು
ಕಾಯುತ್ತಾರೆ ಛಾಯಾಗ್ರಾಹಕರು ಹಗಲಿರುಳು.

ಕ್ಷಣಾರ್ಧದಲ್ಲಿ ಫಸಲನ್ನು ಪೂರ್ತಿ ಧ್ವಂಸಗೊಳಿಸಲು
ಹೇಳಿ ಮಾಡಿಸಿದಂತಿವೆ ಮಿಡತೆಗಳ ದವಡೆ ಹಲ್ಲು.
ದಾಳಿ ಮಾಡಿದರೆ ಮಿಡತೆ ಆಹಾರದ ಕೊರತೆ, ಬರಗಾಲ,
ಉತ್ಪಾದನೆಯ ಅಂದಾಜು ಅಂಕಿ ಅಂಶಗಳು ಬುಡಮೇಲು.
ಇಷ್ಟೇ ಅಲ್ಲ; ತಜ್ಞರ ಪ್ರಕಾರ ಎಷ್ಟೋ ಸಲ
ಪಂಚವಾರ್ಷಿಕ ಯೋಜನೆಗಳೇ ಆಗುತ್ತವೆ ವಿಫಲ !

ಆಕರ್ಷಕವಾದ ಈ ಜೀವಿ ಅಪಾಯಕಾರಿಯೂ ಅಹುದು.
ಹಸುರು ಬಣ್ಣದ ಮಿಡತೆಯೇ ಹಸುರಿಗೆ ಮಿತ್ರಾಗಬಹುದು.

ಮಿಡತೆಗಳ ಇನ್ನೊಂದು ವಿಶಿಷ್ಟ ನಡತೆಯೆಂದರೆ
ಅವು ಸೀದಾ ನಡೆಯುವುದಿಲ್ಲ; ಸದಾ ನೆಗೆಯುತ್ತವೆ.
ಇಲ್ಲಿಂದ ಅಲ್ಲಿಗೆ, ಅಲ್ಲಿಂದ ಮತ್ತಿಲ್ಲಿಗೆ, ಇಲ್ಲಿಂದ ಮತ್ತೆಲ್ಲಿಗೆ ?
ಆ ಗೆಲ್ಲಿಂದ ಈ ಗೆಲ್ಲಿಗೆ, ಈಗಿಲ್ಲಿಂದ ಇನ್ನೆಲ್ಲಿಗೆ ?
ಊಹಿಸುವುದೂ ಅಸಾಧ್ಯ ನಮಗೆ ನಿಮಗೆ.
ಅಚ್ಚರಿಯಿಂದ ನೋಡುತ್ತಾ ಉದ್ಗರಿಸಬಹುದು ಹೀಗೆ :
ಇಲ್ಲಾದರೇನು ? ಎಲ್ಲಾದರೇನು ? ಯಾವ ಗೆಲ್ಲಾದರೇನು ?
ಒಟ್ಟಾರೆ ಗೆಲ್ಲುವುದು, ಗಿಡಪೂರ್ತಿ ಮೆಲ್ಲುವುದು ಮುಖ್ಯ.
ಆ ಮರ ಈ ಮರ ಜಿಗಿತ ಅಜರಾಮರ
ಗೊತ್ತುಂಟು ಮಿಡತೆಗೆ ಈ ನಿತ್ಯ ಸತ್ಯ.
ಆ ಗಿಡ ಈ ಗಿಡ ಧೋಂ ಗಿಡ ತದಿ ಗಿಡ
ಎಂಥ ಲಯ ಬದ್ಧ ! ಮಿಡತೆಗಳ ರುದ್ರ ನೃತ್ಯ.

—ಎಚ್. ದುಂಡಿರಾಜ್

---

ಎಚ್. ದುಂಡಿರಾಜ್, ತಾಂತ್ರಿಕಾಧಿಕಾರಿ, ಕಾರ್ಪೊರೇಷನ್ ಬ್ಯಾಂಕ್ ಮುಖ್ಯ ಕಚೇರಿ, ಮಂಗಳೂರು - 575 001.

## ಸುಖದ ಹಿಂದೆ

ಕಾರ್ಮುಗಿಲು
ಹವಿಯೊಡೆದ ಹದಕ್ಕೆ
ಮುವಗೊಂಡ ನೆಲ
ಸಂಕೋಚ ಹರಿದು
ಸ್ವಚ್ಛಂದ ಸುಖಕ್ಕೆ ಮೈ ತೆರೆದು
ದಳಬಿಚ್ಚಿ

ಗವಘ್ಡ ಡಿಸಿದಾಗ
ಎಂಥ ಹಗುರ!

ಆದರೆ ಗೆಳೆಯಾ,
ಮರೆಯದಿರು ಈ ಸುಖದ
ಬೆನ್ನಿಗಿದ್ದ ಬಿರುಬೇಸಿಗೆಯ
ಧಗೆಯ ಪರಿಚಯ.

ಕಾದು ಗಾರಾದ ಹನೆ
ಬಿರ ಬಿರ ಬಿರಿದ ಮೈಯು
ಪಲುಸೆ ಹೊರಟ
ಅಸ್ತಿಪಂಜರಗಳ ಜೀವಜಾತ್ರೆ

ಹಸಿರು
ನೆಲದುಸಿರು
ಎಂದೋ ಸತ್ತದ್ದು.

ಅಲ್ಲಿ
ಆಗಸದಲ್ಲಿ
ಆದರಾತ್ರ
ಸುಂಟರಗಾಳಿ ಸುತ್ತಿದ್ದು;

ನೆನೆದರೆ
ಜೀವ ಝಲ್ಲೆನ್ನುತ್ತೆ;

ಎಲ್ಲ ಸುಖಗಳ ಹಿಂದಿನ
ನೋವು ಇಂಥದೇ
ಎಂದರೆ ನನ್ನನ್ನು
ತತ್ವಜ್ಞಾನಿ ಎನ್ನಬೇಡ.

— ಜಿ. ಪಿ. ಬಸವರಾಜು

ಜಿ.ಪಿ. ಬಸವರಾಜು, ಪ್ರತಾಪಾಣೆ: 12 ಮಿಲಾಗ್ರೇಸ್ ಸೆಂಟರ್, ಹಂಪನಕಟ್ಟೆ, ಮಂಗಳೂರು-1

# ಪರಿಚಯದ ಕವನ

ಇರುತ್ತವೆ
ತುಮುಲ
ಮನದಾಳದಲ್ಲಿ
ಜೀವ ಜಗತ್ತಿನಲ್ಲಿ
ಬಣ್ಣ ಬದಲಿಸುವ ಪ್ರಾಣಿ
ಗೋಸುಂಬೆಯಲ್ಲಿ
ಬಣ್ಣ ಬದಲಿಸುವ ಪ್ರಾಣಿ
ಗೋಸುಂಬೆಯಲ್ಲಿ
ನಮ್ಮ ನಾಡಿನ ಭ್ರಷ್ಟ
ರಾಜಕಾರಣಿಗಳಲ್ಲಿ.

ಇದ್ದಾವೆ
ಅಚ್ಛೋದ ಸರೋವರದಲಿ
ಪ್ರೇಮ ಪ್ರಚೋದನೆಯ
ರಾಗ ತರಂಗಗಳು
ಉತ್ತರ ಧ್ರುವದಲಿ
ಬಾಯಿ ತೆರೆದಿರುವ
ಮೃತ್ಯು ಕೂಪಗಳು
ನಮ್ಮ ಸಂತ್ತುಲ ಹಡಬೇ
ವ್ಯವಸ್ಥೆಯಲ್ಲಿ
ಧರ್ಮ, ದೇವರು, ಜಾತಿ, ವರ್ಗಗಳು.

ಇದ್ದೇನೆ
ಬೃಹತ್ ಶಿಖರಗಳ ಮಧ್ಯೆ
ಒಂಟಿ ಧ್ವನಿಯಾಗಿ
ಧ್ವನಿಸುವ ಬಂಡೆಗಳ
ಸೊಲ್ಲಡಗಿಸುವ ಹೋರಾಟಗಾರನಾಗಿ

ನೆನ್ನವರೆ ವಿಕ್ಷಿಪ್ತಬದುಕ
ಹಾಸಿನ ಸುತ್ತ
ಮುಳ್ಳ ಬೇಲಿಯಾಗಿ.

—ಹೆಚ್. ಕೆ. ಶಿವಪ್ರಕಾಶ್

---

ಹೆಚ್. ಕೆ. ಶಿವಪ್ರಕಾಶ್ ನಂ. 1, ಮೆಸ್ತ್ರಿಮಾರಪ್ಪ ಬೀದಿ, ಮುನಿರೆಡ್ಡಿಪಾಳ್ಯ, ಬೆಂಗಳೂರು-6

## ಎದೆಯಂಥ ಇರುಳಲ್ಲಿ

ಎದೆಯಂಥ ಇರುಳಲ್ಲಿ ನಾಬರುವೆ ನಿನ್ನಡಿಗೆ
ಹಾರುವ ಹಕ್ಕಿ ರೆಕ್ಕೆ ಅಗಲಿಸಿನಿಂತು
ತೂರಿ ಕಣಿವೆಯ ಒಳಗೆ ಸೇರುವಂತೆ
ಜಮ್ಮಿ ವಿಮಾನದಂತೆ.

ನಾಬರುವೆ ಗೆಳತಿ ನೋವುಗಳ ಹೊತ್ತು
ನನ್ನ ಕಂದಿನ ತುಟಿಯುಹೊತ್ತು
ನಿನ್ನ ಮುಖ, ಕತ್ತುಗಳ ತಡವುತ್ತ ಓಗೆಳತಿ
ಕಪ್ಪುಮುಡಿಯಲ್ಲಿ ನನ್ನ ಹುಡುಕಬರುವೆ.

ಪದರು ಪದರಿನ ತುಂಬ ತುಂಬಿರುವ ಬಿಸಿಮಾಂಸ
ಮಿದುಳು ಸುರುಳಿದೆ ನೋಡು ಮುಡಿಕೆಯೊಳಗೆ
ಇರುಳು ಕಂಬಳಿ ಎಳೆವ ಕತ್ತಲಿನ ನೀರವದಿ
ಕನಸುಗಳು ಕಾಯುತಿವೆ ನಿನಗೆ ಗೆಳತಿ,

ಎದೆ ಬಿಕ್ಕಿ ತುಡಿಯುತಿದೆ
ಗಾಯಗೊಂಡಿದೆ ಇರುಳು
ಗೆಳತಿ, ನಿನ್ನ ತುಟಿ ಎದೆಗಳ ಮೇಲೆ
ಪುಟ್ಟಗೂಡೊಂದ ಕಟ್ಟಬರುವೆ

## ಈ ದಾಳಿಯ ತಪ್ಪು ತಿಳಿಯಬೇಡ

ಈ ದಾಳಿಯು ನೀನು ತಪ್ಪು ತಿಳಿಯಬೇಡವೆ ಹುಡುಗಿ
ಇದು ದೇಹವೊಂದರ ಬಯಕೆ ತುಡಿವುದು ಕಣೇ
ಮಾತಬಾರದ ದೇಹ ತಡಕಾಡಿ ಎದೆಹಸಿವು
ನುಗ್ಗಿ ನಿನ್ನೆಲ್ಲ ಸೂರೆಯಾಡುತಿದೆ ಗೆಳತೀ

ಒಬ್ಬಂಟಿ ಕನಸುಗಳ ಕಟ್ಟುಗಟ್ಟಲಿ ಒಡೆದು
ಭಾವ ಬುದ್ಧಿಯು ಬೆರಗುಸವೆದು ಸವೆದು
ಕುದಿವ ಹೆಂಚಿನ ಕಾವು ಹಡೆಯು ಆಡಿದೆ ನೋಡು
ಅಲೆದ ಮನಸಿನ ಭಯದ ಕಾಡುಮುಂದಿದು.

ನಿನ್ನ ತುಂಬೆಲ್ಲಾ ಮುಸೆದು ತೋಳುಗಳು ಉರಿದು
ನಂಬುಗತಿ ಕಳೆದೆ [illegible]
ನಿನ್ನ ನೋವಿನ ಸಿರಿಯ ಸವಿದು ತಿಂದೆನು ನಾನು
ನನ್ನ ಎಳೆತನದ ಹಸಿವ ಕೊಟ್ಟು.

ಮೂಲ: ಡೆನ್ನಿಸ್ ಬ್ರೂಟಸ್ (Poemsof Black Africa ಪುಸ್ತಕದಿಂದ)
ಭಾಷಾಂತರ: ಅಬ್ದುಲ್ ರಷೀದ್

---

ಅಬ್ದುಲ್ ರಷೀದ್, ರೂಂ.ನಂ. 22, ಮುಸ್ಲಿಂ ವಿದ್ಯಾರ್ಥಿನಿಲಯ. ಸರಸ್ವತೀಪುರಂ ಮೈಸೂರು-9

## ಬೇಕು ನನಗೊಂದು ಓಡುವಕುದುರೆ

ಎಲ್ಲವನ್ನೂ ಬಿಟ್ಟು
ಎಲ್ಲರ ಕಣ್ಣು ತಪ್ಪಿಸಿ
ದೂರ ಓಡುವ ಆಸೆ
ಅದುಮಿಟ್ಟಷ್ಟೂ
ತಲೆಯೆತ್ತುತ್ತಲೇ ಇರುವ ಬಯಕೆ
ಎಲ್ಲಿಗೆ?
ಏಕೆ??
ಹೇಗೆ???
ಉತ್ತರವಿರದ, ಉತ್ತರಸಿಗದ ಪ್ರಶ್ನೆ!

ಆದರೆ, ಹೋಗಲೇ ಬೇಕು ನಾನು
ಯಾರು ಯಾರನ್ನೂ ಪ್ರಶ್ನಿಸದ,
ಇನ್ನೊಬ್ಬರ ತಲೆಯಲ್ಲಿ
ಎಲೆಕ್ಟ್ರೋಡುಗಳ ನೆಟ್ಟು
ದೂರದಿಂದಲೇ ಮನ ಬಂದಂತೆ
ಕುಣಿಸಿ, ನಲಿವ ಬಯಸುವ
ಪರಿಪೀಡಕರದ ಕಿನ್ನರಲೋಕವೊಂದಕ್ಕೆ
ಹೇಗಾದರೂ ಹೋಗಲೇ ಬೇಕು
ನಟಿಸಿ, ನಂಬಿಸಿ, ನಯವಾದಿಯೇ
ನೇಣು ಮುರಿದ ನರಿಗಳ ನರಕದಿಂದ
ದೌಡಾಯಿಸಲೇ ಬೇಕು.

ನಚಿಕೇತನ ಅಗ್ನಿ,
ಬುದ್ಧನ ಜ್ಞಾನ,
ಅಶ್ವತ್ಥಾಮನ ಕೊನೆಯಿರದ ಬದುಕು
ಬೇಕಿಲ್ಲ ನನಗೆ

2

ಬೇಕು,
ಕೇವಲ ನನಗೊಂದು ಆಸರೆ
ಪ್ರೀತಿಯ, ನಿರ್ವಾಜ್ಯಪ್ರೇಮದ
ಕಲ್ಪವೃಕ್ಷದ ನೆಳಲು ಬಿಳಲುಗಳು ಬೇಕು
ಸೋಗಿನ, ಸಿಹಿಲೇಪನದ,
ಮರುಳುಗೈವ ಒಣಮಾತಿನ
ಆಕ್ಟೋಪಸ್‌ಗಳ ಬದಲು
ಉಣಿಸಿ, ತಣಿಸಿ, ಬೆಳೆಸುವ
ಕಾಮಧೇನು ಬೇಕು
ವಾತ್ಸಲ್ಯದ ಕಡಲಲ್ಲಿ
ತೇಲಿ ತನ್ನಲ್ಲೇ ಲೀನವಾಗಿಸಿಕೊಳ್ಳುವ
ಅನಂತ ಗರ್ಭದ ಕ್ಷೀರಸಾಗರ ಬೇಕು
ಸರಕಾರೀ ನೋಟು ಕೊಳ್ಳಲಾಗದ

ಹಂಚಿದರೂ ಹಿಂಗಿಹೋಗದ
ಬೆಳೆದರೂ ಮುಪ್ಪಡರದ
ನಿತ್ಯನೂತನ ಪ್ರೇಮದ ಅಮೃತಧಾರೆ
ನಿರಂತರವಾಗಿ ಬೇಕು.

ಇದಕ್ಕಾಗಿಯೇ ಬೇಕು
ನನಗೊಂದು ಓಡುವ ಕುದುರೆ
ಬದುಕು ತೋರುವ ಕುದುರೆ
ಮತ್ತೆ ಅದರ ಜೊತೆಗೆ
ಸಿದ್ಧಾರ್ಥನನ್ನು ಬುದ್ಧನನ್ನಾಗಿಸಿದ
ಆ ಚೆನ್ನ

—ಉಷಾ ಜಿ. ಪಿ.

495, CMH ರಸ್ತೆ, ಇಂದಿರಾನಗರ ಮೊದಲನೇ ಹಂತ, ಬೆಂಗಳೂರು-38

## ಗಂಡು ದನಿಯ ಹಾಡು

ನಿನ್ನಯ ರೂಪವದು ಮನದಲ್ಲಿ ಇಳಿಯಿತೋ
ಮೈಯಲ್ಲಿ ಝುಳಝುಳಕ ಪುಳಕ.
ನಿಟ್ಟುಸಿರ ಹಾಡುತಳ್ಳುಮರೆಯಾಗಿ ಹೋದರೆ
ಮಾಮರಕೂ ಹೂ ಬಿಡುವ ತವಕ
ಎದೆಯಲ್ಲಿ ನೋವುಗಳು. ಮುತ್ತುಗದಿ ಹೂವುಗಳು
ಮನದ ಮರಮರದಲ್ಲಿ ಮರುಕ.
ಸಾಹಿರನ ಗಜಲುಗಳು ಓಮರನ ಹಾಡುಗಳು
ಹಸಿರು ಎಲೆಎಲೆಯಲ್ಲೂ ಪುಳಕ
ಕಾಡಿದ ನಿನ್ನಯ ದವಳದ ಕಣ್ಣಿಗೆ
ಬರೆದರೂ ಈ ಕವನ ನರಕ.
ಎದೆಯಲ್ಲಿ ಹರಿದಂತ ಹಾಡುಗಳು ನೂರಾರು
ಶಿವ ಹೊತ್ತು ಕುಣಿದಂತೆ ಕರಗ.
ಹಲುಬುವ ಹಲವಾರು ನೋವಿನ ದನಿಗಳಿಗೆ

ಬಿಸಿಲಲ್ಲು ಚಿಗುರೊಡೆವ ದಾಹ.
ಮನದ ಮರುಭೂಮಿಯಲಿ ಕತ್ತಾಳೆ ಮುಳ್ಳುಗಳು
ಶಿವನ ಎದೆಯಲ್ಲಿ ತಲೆಬುರುಡೆ ಪದಕ
ಮನದ ಗಾಯಗಳೆಲ್ಲ ಮರೆಯಾಗಿ ದೂರದಲಿ
ಕತ್ತಾಳೆ ಹಾಲದುವೆ ಸೋಮರಸ ನನಗ
ನಿಟ್ಟುಸಿರ ಮರೆಯಲ್ಲಿ ಕವನಗಳು ಪಲ್ಲವಿಸಿ
ಕತ್ತಾಳೆ ಕಾಡಲ್ಲು ಗಮನ
ಪದಪದಕ್ಕೆ ಪದಪದವು ಸೇರಿಕುಣಿದಂತೆಲ್ಲಾ
ಕವನಗಳು ಕಾಡಲಿ ಕೂಗುಡುವ ಶಾರೀಕ
ನಂದಿಕೋಲುಗಳಿಲ್ಲ, ನಂದಾದೀಪಗಳಿಲ್ಲ
ಕುಂಭಗಳು ಕುಣಿದದ್ದೆ ಕರಗ
ಗಂಡುಂದನಿಯ ಹಾಡುಗಳು, ಕೇಳಿಸಿತೆ ಕೂಗುಗಳು
ನಿನ್ನದೆಯು ಕೆತ್ತುವ ಮನಸು ಮರಕುಟುಕ
ನಿನ್ನ ದೇಹದ ತುಂಬ ಕನಸುಗಳ ಬಿತ್ತುವೆ
ಈಗಿಲ್ಲ ನನ್ನ ಬಳಿ ವಿರಹ,
ನಿನ್ನಯ ಕಣ್ಣುಗಳು ತಲುಪಿಸಿದ ಭಾವಗಳು
ಕವನದ ಪದಪದವೂ ಪಾಕ.
ನನ್ನ ಕವನದ ಗುಬ್ಬಿ ನಿನ್ನ ಮನಸಮ ಕುಕ್ಕಿ
ಹಾರಿ ಹೋಯಿತು ಇಲ್ಲಿ ಈಗಿಲ್ಲ ಗಿಡುಗ

—ಜಿ. ಎನ್. ಮೋಹನ್

142 'ಮನೆ', 5ನೇ ಬ್ಲಾಕ್ 69ನೇ ಕ್ರಾಸ್, ರಾಜಾಜಿನಗರ ಬೆಂಗಳೂರು-10

* * *

ಹೈದರಾಬಾದಿನ ಪುಟ್ಟ ಹುಡುಗ ಅಜರುದ್ದೀನ್ ವಿಶ್ವದಾಖಲೆಯನ್ನು ಸ್ಥಾಪಿಸಿದ್ದಕ್ಕೆ ಶೂದ್ರ ಅಭಿನಂದಿಸುತ್ತೆ

* * *

# ನಮ್ಮ ರಂಗಭೂಮಿ

## ಕಪ್ಪುಜನ ಕೆಂಪು ನೆರಳು

ಐರೋಪ್ಯ ದರೋಡೆಕೋರರಹಾಗಿದ್ದು ಭಾರತದ ಪಶ್ಚಿಮ ಕಡಲಿನಲ್ಲಿ ಹಡಗುಗಳನ್ನು ದೋಚುತ್ತಿದ್ದವರಲ್ಲಿ ಪೋರ್ಚುಗೀಸರು ಪ್ರಸಿದ್ಧರು. ಪೂರ್ವ ಮತ್ತು ದಕ್ಷಿಣ ಆಫ್ರಿಕದ ಸಂಪರ್ಕ ಕೂಡ ನಮಗೆ ಇಂತಹ ಪೈಕೆಸಿಯ ಮೂಲಕ ಆಗಿರಲು ಸಾಧ್ಯವಿದೆ. ಆದರೆ ಅವರು ಕೊಡುತ್ತಿದ್ದ ಕಷ್ಟಗಳನ್ನು ಸಹಿಸಲಾರದೆ ಹಡಗುಗಳಿಂದ ತಪ್ಪಿಸಿಕೊಂಡು ಪಶ್ಚಿಮ ಕರಾವಳಿಯ ಕಾಡುಗಳಲ್ಲಿ ಸೇರಿಕೊಂಡು ಉಳಿದು ಬಂದ ನೀಗ್ರೋಗಳು ಸಿದ್ಧಿಗಳೆಂಬ ಹೆಸರಿನಿಂದ ಶಿರಸಿಯ ಸುತ್ತುಮುತ್ತ ಕಾಣಸಿಗುತ್ತಾರೆ. ಅವರ ಬಣ್ಣದಿಂದ ಅವರ ನಾಚಿಕೆಯೂ ಇಂದಿಗೂ ಅವರನ್ನು ಭಾರತೀಯರು ಕ್ರಿಶ್ಚಿಯನರು ಮೊದಲಾದ ಇತರರಿಂದ ಬೇರ್ಪಡಿಸಿದಂತೆ ತೋರುತ್ತದೆ. ಭಾರತದ ಎಲ್ಲಾ ಜಾತಿಗಳೂ ಪ್ರತ್ಯೇಕಿಸುತ್ತಿರುವುದು ಅವರ ಮತ್ತು ನಮ್ಮ ದುರದೃಷ್ಟಕರ ವರ್ತನೆ ಎನ್ನಬೇಕಾಗುತ್ತದೆ.

ಒಟ್ಟಿನಲ್ಲಿ ಇಂಥ ನಾಚುವ ಜನಗಳನ್ನು ಒಟ್ಟುಗೂಡಿಸುವಂಥ ಒಂದು ಹೊಗಳಿಕೆಗೆ ಯೋಗ್ಯ ಪ್ರಯತ್ನವಂತೂ 'ಜಂಬೆ' ಯವರಿಂದ ನಡೆದಿದೆ. ರಂಗಭೂಮಿಯು ಇಂಥ ಒಂದು 'ಸಾಮಾಜಿಕ ಆಯುಧ' ವೆಂದು ಅರಿತು ಬಳಸಿರುವುದೇ ಇಲ್ಲಿಯ ವಿಶೇಷವೂ ನಮ್ಮ ಸಮಾಜಸುಧಾರಕರ ಕಣ್ಣು ತೆರೆಯಿಸಬಲ್ಲ ಸಾಧನೆಯೂ ಆದೀತು. ಕೆ.ವಿ. ಸುಬ್ಬಣ್ಣನವರು ದಕ್ಷಿಣ ಆಫ್ರಿಕದ ನೀಗ್ರೋಗಳ ಜೀವನವನ್ನು ಕುರಿತು ಚಿನುಲಿ ಅಚಿಬೆಯವರ Things fallapart ಎಂಬ ಕಾದಂಬರಿಯ ವಸ್ತುವನ್ನು ಸಿದ್ಧಿಯರ ಅಭಿನಯಕ್ಕೆ ಅಳವಡಿಸಿದ್ದಾರೆಯಷ್ಟೆ-ಇದರಲ್ಲಿ ಕಂಡುಬರುವ ಕನ್ನಡ ಭಾಷೆಯ ಸರಳ ಸುಂದರ ಛಂದೋಗತಿಯು ಈ ರೂಪಕದ ಉದ್ದಿಶ್ಯವನ್ನು ಸಫಲಗೊಳಿಸಬಲ್ಲುದಾಗಿದೆ. ಇಂಥ ಸರಳತೆಗೆ ಅಭಿನಯವೂ ಸುಲಭ ಮತ್ತು ವಾಸ್ತವತೆಗೆ ಅನುಕೂಲವಾದುದು-ಎಂಬುದು ಮುಖ್ಯ.

---

ಪ್ರೊ. ಕ. ವೆಂ. ರಾಜಗೋಪಾಲ್, ಮುಖ್ಯಸ್ಥರು ಡಿ. ಡಿ. ಎಮ್. ಪ್ಯಾಲೆಸ್ ರಸ್ತೆ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-560 009.

ನಿಜಕ್ಕೂ ನಮ್ಮ ನಾಟಕಗಳಲ್ಲೇ ಅತ್ಯಂತ ಸರಳವೂ ಮಾರ್ಮಿಕವೂ ಆದ ಕೃತಿ ಇನು. ಕಪ್ಪು ಜನ-ಕೆಂಪುನೆರಳು ಒಕೊಂಕೊವ್ವೇ ನಾಯಕನಾಗಿ ಮೆರೆದು ಹುಲಿಯೆನ್ನಿಸಿಕೊಂಡು ಕೊನೆಗೆ ನೇಣುಹಾಕಿಕೊಳ್ಳುವುದೇ ಇದರ ಮುಖ್ಯ ವಸ್ತು. ಇದರಲ್ಲಿ ಎರಡು ಅಂಶಗಳು ಪ್ರೇಕ್ಷಕರನ್ನು ಕಾಡುತ್ತವೆ. ಒಂದು ನಾಯಕನು ಎಂಥವನೆಂಬುದನು ಕುರಿತ ಪದ "ಇವನಂಥೋರಿನ್ನ್ಯಾರಿದ್ದಾರೋ ಹುಲಿಯಂಥೋರಿನ್ನ್ಯಾರಿದ್ದಾರೋ" ಎರಡನೆಯದು ನಾಟಕ ಮುಕ್ತಾಯದ ವೇಳೆಗೆ ಬರುವ ಸುದ್ದಿ ಮತ್ತು ನಾಯಕನನ್ನು ರಂಗದ ಮೇಲೆ ಕಾಣದೇ ಹೋದಾಗ – ತಣ್ಣನೆಯ ಕೆಂಡದಂತೆ ನಮ್ಮ ಮನಸ್ಸಿನಲ್ಲಿ ಉರಿಯುತ್ತಾ ಉಳಿದು ಬಿಡುವುದು.

ಇದರ ಮತ್ತೊಂದು ಸಾಮಾಜಿಕ ಲಾಭವೆಂದರೆ ಸಿದ್ಧಿಗಳು ಮತ್ತು ಇಂಥ ಜನಗಳಿಗೆ ಸ್ವಾಭಿಮಾನವನ್ನುಂಟುಮಾಡಬಲ್ಲ ವಸ್ತುವಾಗಿರುವುದು-ಬಹುಶ, ನಮ್ಮ ಮನರಂಜನೆಯಾಚೆಗಿನ, "ಸತ್ವ" ವಾಗಿದೆ. ಇದನ್ನು ಅಭಿನಯಿಸಿದ ಸಿದ್ಧಿಗಳಿಗೆ ಇದೇ ಮುಖ್ಯವಾದ ಅಪಾಯವೂ ಆಗಿರುವಂತಿದೆ. ವಿಚಾರಿಸಿದಾಗ ನಾಯಕನ ಪಾತ್ರಧಾರಿ ನಿಶ್ಚಿಂತೆಯಿಂದ "ನಾವು ಇದೊಂದೇ ಅಭ್ಯಾಸ ಮಾಡಿರುವುದು. ಬೇರೆ ಕಲಿಯಲು ಅಡ್ಡಿಯಿಲ್ಲ" ಎಂಬ ಅಭಿಪ್ರಾಯವನ್ನು ಸಹಜವಾಗಿ ಹೇಳಿದರು. ಹೀಗೆ ಪ್ರೇಕ್ಷಕರು (ಯಾರು ಬೇಕಾದರೂ ಆಗಿರಬಹುದು) ಮತ್ತು ಅಭಿನಯಿಸುವ ವರ್ಗ ಅಥವಾ Community ಎರಡಕ್ಕೂ ಪ್ರಯೋಜನಕಾರಿಯಾದ ಪ್ರದರ್ಶನವಾಗಿರುವುದಂತೂ ಕನ್ನಡ ರಂಗಭೂಮಿಯ ಸಂದರ್ಭದಲ್ಲಿ ಬಹುಮುಖ್ಯವಾದ ವಿಷಯವಾಗಿರುತ್ತದೆ. ಒಂದು ನಿಷಿದ್ಧ Community ಯ ನಾಟಕವಾಗಿ ಅದರ classical ಲಕ್ಷಣಗಳನ್ನೇ ಪಡೆದಿರುವುದಾದರೂ ಕನ್ನಡಕ್ಕೆ ಇದೊಂದು ವಿಶೇಷ ಕೊಡುಗೆ ಮಾತ್ರವಾಗಂತ್ತದೆ.

ಈ ನಾಟಕದ ಪ್ರದರ್ಶನದಲ್ಲಿ ರಂಗಸಿದ್ಧತೆ ಅಥವಾ ಜೋಡಣೆ (sets) ಬರಿಯ ಸರಳವಾದುದರಲ್ಲಿ ಕಂಡುಬರುವ ಪ್ರಯೋಜನ - ಪಾತ್ರಧಾರಿಗಳು ಹಿನ್ನೆಲೆಗೆ ನಿಂತು ನೋಡುತ್ತಾ ರಂಗಕ್ರಿಯೆಯನ್ನು ನಿರಾತಂಕವಾಗಿ ಸಾಗಿಸಿಕೊಂಡು ಹೋಗುವ ಬಗೆಯಲ್ಲಿದೆ. ನಿಜವಾದ ಪ್ರೇಕ್ಷಕರಿಗೆ ತಡಿಕೆಗೋಡೆಗಳ ಹಿಂದಕ್ಕೆ ಕಂಡುಬರುತ್ತಿದ್ದ ಸಾಲು ಮುಖಗಳು ಪ್ರೇಕ್ಷಕರ ಮತ್ತೊಂದು ಸಾಲಾಗಿತ್ತು. ಇದರಿಂದ Community Theatre ನ ಲಕ್ಷಣಗಳು ಇಲ್ಲಿ ಖಚಿತವಾಗಿವೆ, ಅದುದರಿಂದ ಇಂತಹ ಪ್ರಯೋಗಗಳನ್ನು ಆಧುನಿಕ ರಂಗಭೂಮಿಯೂ ಸೇರಿದಂತೆ ಬವಣೆಗಳಲ್ಲೂಡಾ ಸಾಧಿಸಬಹುದೆಂಬ ನಂಬಿಕೆಯೂಗುತ್ತಿದೆ. ಇದರಲ್ಲಿ ಹೆಣ್ಣುಗಂಡು ಜೊತೆಯಾಗಿ ಅಶ್ಲೀಲದ ಅಥವಾ ಅತಿರೇಕದ ವರ್ತನೆಗಳಿಲ್ಲದೇ Community ಹಂತದಲ್ಲಿಯೇ ಸ್ವಾಭಿಮಾನವನ್ನು ತಂದುಕೊಡುವ ಕೃತಿಯಾಗಿರುವುದಂತೂ ತುಂಬ ಉಪಯುಕ್ತವಾದುದಾಗುತ್ತದೆ. ಇದರ

ವಸ್ತುವಾಗಿ Tribal life ಹಾಗು ಹೊಕ್ಕಾಗಿರುವುದರಿಂದಲೇ ಇದೊಂದು ವಿಶೇಷವೂ ವಿಶಿಷ್ಟವೂ ಆದ ರಂಗಪ್ರಯೋಗವಾಗಿರುತ್ತದೆ.

ನಗರದ ನಾಟಕ ಪ್ರಯೋಗಗಳನ್ನು ನೋಡಿ ರೂಢಿಯಾದವರಿಗೆ ಇಲ್ಲಿಯ ನಟನಟಿಯರು ನಿರಾಶೆಯನ್ನು ಉಂಟುಮಾಡಬಹುದು. ಅಂಥವರು ಇವರಲ್ಲಿ ಇಂಥಿಂಥವರು ಉತ್ತಮ ನಟನಟಿಯರೆಂದು ಹುಡುಕಾಡಲೂಬಹುದು. ವಾಸ್ತವವಾಗಿ ಇಲ್ಲಿಯ ಪಾತ್ರಗಳು ನಾಗರಿಕ ನಾಟಕಗಳ ಪಾತ್ರಗಳಂತೆ ಅಲ್ಲವೇ ಅಲ್ಲ. ಇಲ್ಲಿ ಒಂದು Community ಇಡಿಯಾಗಿ ಪಾತ್ರವಹಿಸುತ್ತಿದೆ, ಮತ್ತು ಇದರ ಲಾಭವು ನಾಗರಿಕರಿಗಿಂತಲೂ ಅಧಿಕವಾಗಿ ಸಿದ್ಧಿ ಮತ್ತು ಅಂತಹ oppressed ಜನಾಂಗಗಳಿಗೇ ಎಂಬುದನ್ನು ಮರೆಯಬಾರದು. ಅಂಥವರ ಜಾಗೃತಿಯನ್ನಂತೂ ಈ ನಾಟಕವು ತುಂಬ ಸೊಗಸಾಗಿರುತ್ತದೆ.

ಒಟ್ಟಿನಲ್ಲಿ "ಕಪ್ಪು ಜನ ಕೆಂಪು ನೆರಳು" ಪ್ರಯೋಗವು ಎಲ್ಲರೂ ಗಮನಿಸಬೇಕಾದ ಒಂದು ಸಾಧನೆಯಾಗಿದೆ. ಇದಕ್ಕೆ ರಾಜಕೀಯವಾದ ಬಣ್ಣ ಬಾರದಂತೆ ಸಾಧಿಸಿದ್ದಾಗಿದ್ದರೆ ಎಷ್ಟೊಂದು ಹಿತಕರವಾಗುತ್ತಿತ್ತು ? ಎಂಬುದೊಂದೇ ಆತಂಕವಾಗಿದೆ.

—ಕ. ವೆಂ. ರಾಜಗೋಪಾಲ್

## ಕೃಷ್ಣಪ್ಪನ 'ಸೂರ್ಯ ಶಿಕಾರಿ'

ಬಿ.ವಿ. ಕಾರಂತರು ಬೆಂಗಳೂರಿನ ರಂಗಭೂಮಿಯಲ್ಲಿ ಬೇರು ಬಿಡುವ ಸಂದರ್ಭದಲ್ಲಿ ಸದಾ ಅವರೊಡನಿದ್ದು ಬ್ಯಾಕ್‌ಸ್ಟೇಜ್‌ನ ಯಜಮಾನನಾಗಿದ್ದ ಕೃಷ್ಣಪ್ಪ ಇದ್ದಕ್ಕಿದ್ದಂತೆ ನಾಪತ್ತೆಯಾಗಿಬಿಟ್ಟರು. ರಂಗಭೂಮಿಯನ್ನು ಪೂರ್ಣಮರೆತು ಕಾರ್ಪೊರೇಷನ್ ಕಂಟ್ರಾಕ್ಟರ್ ಆಗಿ ಯಾವಾಗಲಾದರೂ ಒಮ್ಮೊಮ್ಮೆ ಕಲಾಕ್ಷೇತ್ರದ ಮೆಟ್ಟಿಲುಗಳ ಮೇಲೆ ಕಾಣಿಸಿಕೊಂಡರೂ ಜೋಕ್‌ಮಾಡಿ (ತನ್ನ ಬಗ್ಗೆ ಜೋಕ್‌ಮಾಡಿದರೆ ಸಹಿಸಿಕೊಳ್ಳದ) ಹೊರಟು ಹೋಗುತ್ತಿದ್ದ. ಈ ವ್ಯಕ್ತಿ ಮತ್ತೆ ರಂಗಭೂಮಿಯ ನಡುವೆ ಕಾಣಿಸಿಕೊಳ್ಳುತ್ತಿರುವುದು ಸಂತೋಷದ ವಿಷಯ.

ಕಳೆದ ಒಂದೂವರೆ ವರ್ಷದಿಂದ 'ಪ್ರತಿಮಾ' ದ ನಾಡಿ ಹಿಡಿದು ಗೋಪಾಲ ಕೃಷ್ಣನಾಯರ್ (ಎನ್.ಎಸ್.ಡಿಯ ಕಾಣಿಕೆ) ರವರಿಂದ ರಂಗ ಶಿಬಿರವನ್ನು ಮಾಡಿಸಿ ಕೃಷ್ಣಪ್ಪ ಸುದ್ದಿಗೆ ಬಂದವರು. ಈ ನಡುವೆ 'ತಿರುಕನ ಕನಸು' ನಿರ್ದೇಶಿಸಿದರು.

ಫೆಬ್ರವರಿ 12 ರಂದು ಜನ ನಾಟ್ಯಮಂಡಳಿಯ ಮೂಲಕ "ಸೂರ್ಯ ಶಿಕಾರಿ" ಕಲಾಕ್ಷೇತ್ರದಲ್ಲಿ ಪ್ರಯೋಗವಾದಾಗ ಇನ್ನೂ ಒಂದಷ್ಟು ರಿಹರ್ಸಲ್ ಇದ್ದಿದ್ದರೆ ಒಂದು ಉತ್ತಮ ಪ್ರಯೋಗವಾಗುತ್ತಿತ್ತು ಎಂದು ಅನ್ನಿಸದಿರಲಿಲ್ಲ.

ಉತ್ಪಲ್‌ದತ್‌ರವರ ಸೂರ್ಯ ಶಿಕಾರಿ ಮೊದಲು ಪ್ರಕಟವಾಗಿದ್ದು ದೆಹಲಿಯಿಂದ ಬರುತ್ತಿರುವ 'ಎನಾಕ್ಟ್' ಪತ್ರಿಕೆಯಲ್ಲಿ. ಐದಾರು ವರ್ಷಗಳ ಹಿಂದೆಯೇ ಟಿ.ಎನ್. ನರಸಿಂಹನ್ ಅನುವಾದಿಸಲು ತನ್ನ ಕೊಠಡಿಯ ಹಾಸಿಗೆಯ ಮೇಲೆಲ್ಲ ಎಲ್.ಪಿ. ರೆಕಾರ್ಡ್‌ಗಳನ್ನು ಹರಡಿಕೊಂಡು ಸಂಗೀತ ಕೇಳುವುದರ ನಡುವೆ ಪ್ರಯತ್ನಿಸಿದ್ದುಂಟು. ಯಾಕೆ ನಿಂತಿತೋ ತಿಳಿದುಕೊಳ್ಳಲು ಪ್ರಯತ್ನಿಸಲಿಲ್ಲ. ಆದರೆ ಈಗ ಎಂ.ಪಿ. ಪ್ರಕಾಶ್‌ರವರು ಅತ್ಯಂತ ಸಮರ್ಥವಾಗಿ ಅನುವಾದಿಸಿದ್ದಾರೆ. ಇಂಥ ಒಳ್ಳೆಯ ನಾಟಕ ಎಂದೋ ಕನ್ನಡ ರಂಗಭೂಮಿಗೆ ಪರಿಚಯವಾಗಬೇಕಾಗಿತ್ತು ಎನ್ನುವ ಮಟ್ಟಿಗೆ ಅನುವಾದವಿದೆ.

"ಸೂರ್ಯ ಶಿಕಾರಿ" ಸಮುದ್ರ ಗುಪ್ತ (ಗುಪ್ತರ ಕಾಲದ) ಮತ್ತು ಬೌದ್ಧಬಿಕ್ಷು ಕಲ್ಹಣ ಹಾಗೂ ವಿಜ್ಞಾನ ಮತ್ತು ಧರ್ಮದ ನಡುವೆ ಉದ್ಭವಿಸುವ ಸಂಘರ್ಷದ ಸ್ವರೂಪವೇ ಆಗಿದೆ. ಆದರೆ ಇಲ್ಲಿ ಆಳವಾಗಿ ಮೂರ್ತಿಭವಿಸಿರುವುದು ಪ್ರೇಮ ಮತ್ತು ಅಭಿಮಾನ. ತುಂಬು ಕೀಳು ಮಟ್ಟಕ್ಕೆ ಹೋಗಿದ್ದ ರಾಜ್ಯದ ಅಂತರಂಗವನ್ನು ಕೆದುಕಲು ಬರುವುದು ಕಲ್ಹಣನ ಶಿಷ್ಯ ಇಂದ್ರಾಣಿಯ ಪ್ರವೇಶದಿಂದ. ಸಮುದ್ರಗುಪ್ತನ ಸೇನಾನಿಯಾದ ಹಯಗ್ರೀವನನ್ನು ಗೆಲ್ಲುವುದರ ಮೂಲಕ ಒಟ್ಟು ನಾಟಕದ ಕ್ರಿಯೆ ಬದಲಾಗುತ್ತದೆ. ಮೇಲ್ನೋಟಕ್ಕೆ ಪ್ರಾರಂಭದಲ್ಲಿ ಸಮುದ್ರಗುಪ್ತ ಕಲ್ಹಣನ ಪರವಾಗಿ ಕಂಡರೂ ಮತ್ತೆ ತನ್ನ ವ್ಯವಸ್ಥೆ ಪ್ರಧಾನವಾಗುವತ್ತದೆ. ಈ ಕಾರಣಕ್ಕಾಗಿ ಬದಲಾಗುತ್ತಿರುವ ಘಟನೆಗಳಿಗೆ ಸ್ಪಂದಿಸಲಾರದೆ ಹೋಗುತ್ತಾನೆ. ಕೊನೆಗೆ ಇಂದ್ರಾಣಿಯನ್ನು ಮತ್ತು ತನ್ನ ಆತ್ಮೀಯ ಸೇನಾನಿ ಹಯಗ್ರೀವನನ್ನು ಆನೆಯಿಂದ ತುಳಿಸಿ "ಭಯ" ಸದಾ ಜಾಗೃತವಾಗಿರುವಂತೆ ಮಾಡುತ್ತಾನೆ.

ಅರ್ಥಗರ್ಭಿತ ಪಾತ್ರಗಳ ಮೂಲಕ ನಾಟಕ ವಿಸ್ತಾರವಾಗುತ್ತ ಹೊದರೂ ನಿರ್ದೇಶಕರು ಪಾತ್ರಗಳ ಚಲನೆಗೆ ಮತ್ತಷ್ಟು ಜೀವತುಂಬಬಹುದಾಗಿತ್ತು. ತುಂಬಿದರೆ ಕೃಷ್ಣಪ್ಪನಿಗೆ ಸವಾಲಿನ ಪ್ರಯೋಗವೂ ಆಗಬಹುದು. ಯಾಕೆಂದರೆ ನಾಟಕಕ್ಕೆ ಮತ್ತಷ್ಟು ಕಳೆಕಟ್ಟುವ ನಟರಿರುವುದರಿಂದ ಹೆಚ್ಚು ಸಮಸ್ಯೆಯಾಗಲಾರದು. ಇಷ್ಟಾದರೂ ಹಯಗ್ರೀವನ ಪಾತ್ರದಲ್ಲಿ ಶಿವಮೊಗ್ಗದ ವೆಂಕಟೇಶ್, ಇಂದ್ರಾಣಿಯ ಪಾತ್ರದಲ್ಲಿ ನಳಿನಿ ಮೂರ್ತಿ ಹಾಗೂ ಕಲ್ಹಣನ ಪಾತ್ರದಲ್ಲಿ ನಂಜುಂಡಯ್ಯ ಎದ್ದು ಕಾಣುತ್ತಿದ್ದರು. ದುರ್ಧರನಾಗಿ ಎಸ್.ಕೆ. ಮಾಧವರಾವ್ ಬಗ್ಗೆ ಏನೂ ಹೇಳಬೇಕಾಗಿಲ್ಲ. ಕಾರಣವಿಷ್ಟೇ : ಕನ್ನಡ ರಂಗಭೂಮಿಯ ಅತ್ಯಂತ ಪ್ರತಿಭಾನ್ವಿತ ನಟ. ಸಮುದ್ರಗುಪ್ತನ ಪಾತ್ರದಲ್ಲಿ ಹುಲಿಮಾನೆ ಗಂಗಾಧರಯ್ಯ ಹಾಗೂ ರಾಣಿಯ ಪಾತ್ರದಲ್ಲಿ ಸಂಗಮಿತ್ರ ಮತ್ತಷ್ಟು ಚುರುಕಾಗಬಹುದಾಗಿತ್ತು. ಒಟ್ಟಿನಲ್ಲಿ ಕೆಲವು ದೋಷಗಳ ನಡುವೆಯೂ ನೋಡಬಹುದಾದ ನಾಟಕ.

—ಸಿದ್ಧಾರ್ಥ

# ಒಳನೋಟ

ಪ್ರಿಯ ಶೂದ್ರ,

'ಶೂದ್ರ' ಜನವರಿ ಸಂಚಿಕೆಯ ಗೆಳೆಯ ಬಾಪು ಹೆದ್ದೂರ ಶೆಟ್ಟರ 'ಒಳನೋಟ'ದ ಬಗ್ಗೆ ನನ್ನ ಅನಿಸಿಕೆ. ಯಾವ ಒಂದು ಸಿದ್ಧಾಂತವೂ, ಹೊಸದಾಗಿ ಪ್ರಚಲಿತವಾದಾಗ ಅಥವಾ ಕಂಡುಹಿಡಿದಾಗ, ಅದನ್ನು ಅವರ ಹೆಸರಿನಿಂದಲೇ ಗೌರವಿಸುವುದು, ಅಥವಾ ತೆಗಳುವುದು ಲೋಕದಲ್ಲಿ ಬಂದಿರುವ ಪದ್ಧತಿ. ಅದು ಅನಿವಾರ್ಯ ಕೂಡ. ಮೈ ಹಾಗೂ ಮನಸ್ಸನ್ನು ಬಿಸಿಮಾಡಿಕೊಂಡೇ ನೋಡುವವರಿಗೆ ಏನು ತಾನೆ ಹೇಳಲು ಸಾಧ್ಯ ?

ಇಂದಿರಾ ಕಾಂಗ್ರೆಸ್ ಹಾಗೂ ಲೋಹಿಯಾ ಸಿದ್ಧಾಂತವನ್ನು ಸಮನಾಗಿ ಕಂಡವರಿಗೆ ನಾನೇನು ಹೇಳುವುದಿದೆ ? ಸಂಭವಾಮಿ ಯುಗೇ ಯುಗೇ ಈ ಲೋಕಕ್ಕೆ ಬಂದ ಅನಿಷ್ಟವಾದ ಪಲಾಯನವಾದವಷ್ಟೇ ?

ಒಳ್ಳೆಯದಾಗಲು ಹಲವಾರು ಜನ, ಕಾರಣಗಳು ಬೇಕಾದಾವು. ಹಾಳು ಮಾಡಲು ಹಣ, ಅಧಿಕಾರ, ಯೌವ್ವನ, ಅಜ್ಞಾನ, ಈರ್ಷೆ, ದ್ವೇಷ ಒಂದೊಂದೇ ಒಬ್ಬ ರಾಕ್ಷಸೀ ಶಕ್ತಿಯುಳ್ಳವನಿಗೆ ಸಾಕು. ಉದಾಹರಣೆಗೆ, ಸ್ವಾತಂತ್ರ್ಯ ನಂತರದ ನೆಹರೂ, ಇಂದಿನ ಎಲ್ಲ ಸಮಸ್ಯೆಗಳಿಗೂ ಮೂಲ ಕಾರಣನಾಗಿ, ಇಡೀ ದೇಶವನ್ನು ಕರಾಳತೆಯತ್ತ ಕೊಂಡೊಯ್ದ ಒಬ್ಬ ದೇಶದ್ರೋಹಿಯಾಗಿ ಕಾಣುತಾರೆ. ತನ್ನ ಐಷಾರಾಮಕ್ಕೆ, ವಿಶ್ವನಾಯಕನಾಗುವ ಹಂಬಲಕ್ಕೆ ಬಲಿಯಾಗಿ ಇಡೀ ಗಾಂಧಿವಾದವನ್ನೇ ಕೊಂದ ಜೂದಾಸನಾಗಿ ಕಾಣುತ್ತಾರೆ. ಅಲ್ಪ ಪ್ರಮಾಣದಲ್ಲಿದ್ದ ಭ್ರಷ್ಟಾಚಾರ, ಸ್ವಜನಪಕ್ಷಪಾತ, ಜಾತೀಯತೆ, ಇಬ್ಬಂದಿತನ ಅವರ ಆಡಳಿತದಲ್ಲಿ ತಾನೆ ಹೆಮ್ಮರವಾಗಿ ಬೆಳೆದದ್ದು. ಅದೇ ಪರಂಪರೆಯ ಇಂದಿರಮ್ಮ ಅವುಗಳೆಲ್ಲವನ್ನು ಸಾರಾಸಗಟಾಗಿ, ಇವುಗಳೆಲ್ಲವೂ ವಿಶ್ವದ ಸಮಸ್ಯೆಗಳೆಂದೂ ಹಗುರವಾಗಿ, ಉಡಾಫೆಯಾಗಿ ಪ್ರೋತ್ಸಾಹಿಸಿದ್ದು ಎಂತಹ ಕರಾಳತೆ ?

ಪ್ರಧಾನಿಯ ಮನೆಯಲ್ಲೇ ಅಥವಾ ರಾಷ್ಟ್ರಾಧ್ಯಕ್ಷನ ನೆರಳಿನಲ್ಲಿಯೇ ನಡೆಯುವ ಗೂಢಚಾರ, ಪಿತೂರಿ ಹಾಗೂ ವಂಚಕತನಕ್ಕೆ ಲಂಗೋಟಿಯೇ ಪೀತಾಂಬರವಾಗಿರುವ ದೇಶದ ದರಿದ್ರ ನಾರಾಯಣರನ್ನು ದೂರೋಣವೇ ?

---

ಎನ್. ಈಶ್ವರ, ಸಮಾಜವಾದಿ, [illegible], ಇರ್ವಿನ್ ರಸ್ತೆ, ಮೈಸೂರು-1

ಪ್ರಜಾಪ್ರಭುತ್ವದಲ್ಲಿ ಆಡಳಿತ ಪಕ್ಷದಷ್ಟೇ, ಪ್ರತಿಪಕ್ಷದ ಬೆಳವಣಿಗೆಯೂ ಅಗತ್ಯವಷ್ಟೇ ? ಅನಿವಾರ್ಯವಷ್ಟೇ ? ಆದರೆ ನೆಹರೂ, ಅನವಶ್ಯಕವಾದರೂ ವಿರೋಧ ಪಕ್ಷಗಳನ್ನು ಅವಿಚ್ಛ ಒಡ್ಡಿ, ಭ್ರಷ್ಟರನ್ನಾಗಿಸಿ, ತನ್ನ ಪಕ್ಷಕ್ಕೆ ಸೇರುವಾಗ "ಮುಕ್ತದ್ವಾರ" ಎಂದದ್ದು. ಇಂದಿರಮ್ಮನ ಕಾಲದಲ್ಲಿ ಕರಾಳತೆಯ ಎಲ್ಲಾ ದ್ವಾರಗಳೂ ಮುಕ್ತಿ ಪಡೆದದ್ದು ಎಷ್ಟು ಸೋಜಿಗ, ಅನಾಗರಿಕ ? ವಿಶ್ವದ ಎಚ್ಚೆತ್ತ ರಾಜಕೀಯಕ್ಕೆ ಪಕ್ಷಾಂತರ ಭಾರತದ ಕರಾಳ ಕೊಡುಗೆಯಲ್ಲದೆ ಮತ್ತೇನು ? ಈಗ ಬಂದಿರುವ ಪಕ್ಷಾಂತರ ನಿರೋಧ ಶಾಸನಕ್ಕೆ ನನ್ನ ಸ್ವಾಗತವಿದ್ದರೂ, ಇಲ್ಲಿನ ಲೋಕ ಸಭೆಯ ಅಧ್ಯಕ್ಷರುಗಳು ಯಾವಾಗಲೂ ಆಡಳಿತ ಪಕ್ಷದ ವಕ್ತಾರತರಂತೆ ಅಥವಾ ಗುಲಾಮರುಗಳಂತೆ ವರ್ತಿಸಿರುವ ಉದಾಹರಣೆಗಳಿರುವಾಗ ನಾವು ಏನು ಪರಿವರ್ತನೆಯನ್ನು ಕಾಣಲಾದೀತು ?

ಇಂದಿನ ಹೊಲಸು ರಾಜಕೀಯವನ್ನು ನನಗಿಂತಲೂ ಹತ್ತಿರದಿಂದ ಕಂಡಿರುವ ಹೆದ್ದಾರರ ಕಣ್ಣುಗಳು ನಿಜವಾಗಿಯೂ ಹಳದಿಯಾಗಿವೆ. ಲೋಹಿಯಾರವರನ್ನು ಹಾಗೂ ಅವರ ಅನುಯಾಯಿಗಳನ್ನು ಹಳದಿಕಣ್ಣಿನಿಂದಲೇ ಕಂಡಿದ್ದಾರೆ ಎನಿಸುತ್ತದೆ. ಸರ್ಕಾರದೊಂದಿಗೆ ಸಹಕರಿಸಬೇಕು ಎಂದು ಅಶೋಕ ಮೆಹ್ತಾ ಕೇಳಿದರೆ, ಅದನ್ನು ಸಂಪೂರ್ಣವಾಗಿ ವಿರೋಧಿಸಬೇಕು ಎಂದು ಲೋಹಿಯಾ ಹೇಳಿದರು. (ಸಮಾಜವಾದ ಮೊದಲ ಪಾಠಗಳು. ಪುಟ 11) ರಾಜಕೀಯದಲ್ಲಿ ಅಶೋಕ ಮೆಹ್ತಾರಂತಹ ಅನುಕೂಲವಾದಿಗಳು, ಅವರ ಹಿಂಬಾಲಕರು ಹಾಗೂ ಲೋಹಿಯಾ, ಅವರ ಹಿಂಬಾಲಕರು ಕ್ರಮವಾಗಿ, ಇವರುಗಳಿಂದಾದ ಬಾಗಿಲು ಕಾಯುವಿಕೆ, ಹೋರಾಟ ಇವು ಇತಿಹಾಸದ ಸತ್ಯಗಳು. ಈ ಹಿಂದೆ 38 ವರ್ಷಗಳಲ್ಲಿ ಕಾಂಗ್ರೆಸ್ ಮಾಡಿರುವ ಕರಾಳ ಕೃತ್ಯಗಳಿಗೆ, ಅಶೋಕ ಮೆಹ್ತಾರಂತವರ ಪಾಲು ಇಲ್ಲವೇ ? ಇಂದು ನಾಲಿಗೆ ಹೊರಳಿಸಿ ಪ್ರಯೋಜನವೇನು ?

ಇಡೀ ಭಾರತದಲ್ಲಿಯೇ ಇಲ್ಲದ ಕರ್ನಾಟಕ ಭೂಶಾಸನ ಪದ್ಧತಿಯ ಹಿಂದಡಗಿರುವ ಸ್ವಾರ್ಥ, ಕರಾಳತೆ, ಮತ್ಸರ ಎಷ್ಟು ಭೀಕರ ? ಇದರಿಂದಾದ ಪ್ರಯೋಜನವಾದರೂ ಎಷ್ಟು ? ಕೇವಲ ಭೂಮಿ ಮಿತಿ ಬಂದರೇ ಸಾಕೆ ? ನಗರಗಳಲ್ಲಿನ, ಕೈಗಾರಿಕೆಗಳಲ್ಲಿನ ಆಸ್ತಿಗಳಿಗೆ ಮಿತಿಬೇಡವೆ ? ದೇಶದ ಕೇವಲ ಶೇಕಡಾ 3 ಜನ, ಭಂಡವಾಳಶಾಹಿಗಳು ರಾಜಕಾರಣಿಗಳು, ಭ್ರಷ್ಟಾ ಅಧಿಕಾರಿಗಳು, ಇವರುಗಳೆಲ್ಲರ ತಲೆಹಿಡುಕರ ಐಷಾರಾಮಕ್ಕೆ, ಕರಾಳತೆಗೆ ಉಳಿದ ಶೇಕಡಾ 97 ಜನ ಜೀತ ಮಾಡುತ್ತಿಲ್ಲವೇ ?

ಸಮಾನತೆ ಎಲ್ಲ ಕ್ಷೇತ್ರಗಳಲ್ಲಿ, ಎಲ್ಲ ಪರಿಸರಗಳಲ್ಲಿ ಬರಬೇಡವೇ ? ಇಂದಿಗೂ ನಗರದ ಕಾಳ ಹಣದ ಮಾಲೀಕರು "ಫಾರಂ" ಗಳ ಹೆಸರಿನಲ್ಲಿ ತಮ್ಮ ಕಪ್ಪು ಹಣವನ್ನು ಬಿಳಿಯಾಗಿಸಿಕೊಳ್ಳುತ್ತಿಲ್ಲವೇ ? ಇಂದಿರಮ್ಮ ತಂದ ಬೇರರ್ ಬಾಂಡ್ ಸಿದ್ಧಾಂತ

ಕರಿಹಣದ ಗೌರವ ತಾನೆ ? ಹಾಗೂ ಕಾಫಿ, ಟೀ, ರಬ್ಬರ್ ಬೆಳೆಸುವ ಕರಿ ಆಂಗ್ಲರಿಗೆ ಯಾವ ಭೂಮಿತಿಯಿದೆ ?

ಸ್ವಯಂ ಶುದ್ಧಿಯಿಲ್ಲದೆ ಸಾರ್ವಜನಿಕ ಶುದ್ಧಿಯಾಗದು ಎನ್ನುವ ಸಿದ್ಧಾಂತದವನು ನಾನು. ಅಯೋಗ್ಯರಿಂದ ಯಾವ ಯೋಗ್ಯ ಕೆಲಸವೂ ಸಾಧ್ಯವಾಗದು. ಅದು ಕನಸಿನ ಮಾತು. ಸ್ವಾತಂತ್ರ್ಯ ನಂತರ ಮೌಲ್ಯಗಳು ಅಳಿದು ಹೋಗಿ ಇಂದು ಎಲ್ಲಾ ಪಕ್ಷಗಳೂ ಕರಾಳತೆ, ಕುಟಿಲತೆ ಹಾಗೂ ಅಪ್ರಾಮಾಣಿಕತೆಗಳಿಂದ ಹೊರತಾಗಿಲ್ಲ. ಶೇಖಡಾವಾರು ವ್ಯತ್ಯಾಸವಷ್ಟೆ. ಎಲ್ಲ ಪಕ್ಷಗಳಿಗೂ ವಿಚಾರವಂತರು, ಶುದ್ಧಹಸ್ತರು ಬೇಕಾಗಿಲ್ಲ. ಗುಲಾಮರು, ಮದ್ಯವ್ಯಸನಿಗಳು, ಹಲಾಲು ಕೋರರು, ವಂಚಕರು, ಕರಾಳರುಬೇಕು. ಯಾವ ಪಕ್ಷವೂ ಹಣ ಹಾಗೂ ಅಧಿಕಾರದ ಲಪಟಾವಣೆ, ಶೋಷಣೆ, ಲಫಂಗತನದಿಂದ ದೂರವಾಗುಳಿದಿಲ್ಲ. ಇಂದು ಯಾವ ಪಕ್ಷವನ್ನಾದರೂ ಹಣ ಹಾಗೂ ಲಂಪಟತನದಿಂದ ತನ್ನದನ್ನಾಗಿಸಿಕೊಳ್ಳಬಹುದು. ಗೆಳೆಯ ಹೆದ್ದೂರರು ನನಗಿಂತ ಇದರಲ್ಲಿ ಹೆಚ್ಚಿನ ತಿಳುವಳಿಕೆಯುಳ್ಳವರಾಗಿದ್ದಾರೆ. ಉದಾಹರಣೆಗೆ ಜನತಾ ಪಕ್ಷದ ಅಧ್ಯಕ್ಷ ಚಂದ್ರಶೇಖರರು ಬರೆದ "ನನ್ನ ಪಾದಯಾತ್ರೆ ಏಕೆ? (ಕನ್ನಡ ಪ್ರಭ 3-2-83) ಯ ಉಪದೇಶ ಯಾರಿಗಾಗಿ? ಜನತಾ ಪಕ್ಷವಂತೂ ಆಚರಿಸಿಲ್ಲ. ಮಾಜಿ ಸಮಾಜವಾದಿ ಚಂದ್ರಶೇಖರರು ಇಲ್ಲಿನ ಜಾತಿಯೊಂದರ ಮಠಾಧೀಶರಿಗೆ ಶರಣಾಗುವುದು ಹಾಗೂ ಹೆಸರಾಂತ ಲಂಚಕೋರ, ಭ್ರಷ್ಟ, ಮಹಾರಾಷ್ಟ್ರದ ಮಾಜಿ ಮುಖ್ಯಮಂತ್ರಿ ಅಂತುಳೆಯನ್ನು ಹೊಗಳುವುದು ಎಂತಹ ಇಬ್ಬಂದಿತನ. ರಾಜ್ಯ ರಾಜ್ಯಕ್ಕೆ ನೀತಿಗಳ ಬದಲಾವಣೆ ಯಾವ ಕೊಳಕು ರಾಜಕೀಯ. ಕೇರಳ ಹಾಗೂ ಪಶ್ಚಿಮ ಬಂಗಾಳದ ಕಾಂಗ್ರೆ ಪಕ್ಷದ ಸಹಚರ ಜನತಾ ಪಕ್ಷ, ಇತರ ರಾಜ್ಯಗಳಲ್ಲಿ ಅದರ ಶತ್ರು. ಈ ರಾಜಕೀಯ ಹೊಲಸಿಗೆ ಯಾವ ಶಬ್ದಕೋಶದ ನಿಖರವಾದ ಅರ್ಥ ಸಿಕ್ಕೀತು ?

ಆಧುನಿಕ ಬದುಕಿನ ಇಬ್ಬಂದಿತನದ ಬಗ್ಗೆ ನನಗೆ ವ್ಯಥೆಯಾಗುತ್ತದೆ. ಎಲ್ಲಪಕ್ಷಗಳ ಗುರಿ ಲಂಪಟತನ, ಹಾದರ, ಹಣದ ಲಪಟಾವಣೆ ಹಾಗೂ ಯಾವ ಅಪ ಮಾರ್ಗದಿಂದಲಾದರೂ ಅಧಿಕಾರ ಪಡೆಯುವ ಹವಣಿಕೆ. ಇಂದಿನ ಯಾವ ರಾಜಕಾರಣಿಯಾಗಲೀ, ಅನುಯಾಯಿಗಳಾಗಲೀ ಶುದ್ಧರಾಗುಳಿದಿಲ್ಲ. ಆಧುನಿಕ ರಕ್ತಪಿಪಾಸುಗಳಿವರು, ರಾಕ್ಷಸರು, ಮಾಯಾವಾದಿಗಳು. ಇಂದು ಮಾನವೀಯತೆ ಕಾಡಿನಲ್ಲಿದೆ. ಕಾಡು ಪ್ರಾಣಿಗಳಲ್ಲಿದೆ. ನಾಗರೀಕತೆಯೇನೆಂದೇ ಗೊತ್ತಿರದ ಪ್ರಾಣಿಗಳು, ಹಸಿವಿಲ್ಲದೆ ಅಥವಾ ಆಗತ್ಯವಿಲ್ಲದೆ ಯಾರಿಗೂ ತೊಂದರೆ ಕೊಡುವುದಿಲ್ಲ ಕೇಡು ಮಾಡುವುದಿಲ್ಲ. ಆವರೆ ಮಾನವ ಇನ್ನೊಂದು ಕ್ಷಣದಲ್ಲಿ ಸಾಯುವಂತಿದ್ದರೂ, ಅವನ ಈರ್ಷೆ, ದ್ರೋಹ, ಕಪಟತನ, ವಂಚನೆ, ಲಂಪಟತ್ವಗಳು ಶತಶತಮಾನಗಳಿಗಾಗುವಷ್ಟಿದೆ. ತನ್ನ ದುಷ್ಟತನದಿಂದ ಮಾನವ ನರನಾಗುಳಿದಿಲ್ಲ, ವಾನರನಾಗಿದ್ದಾನೆ.

ನಮ್ಮ ಮೂಢನಂಬಿಕೆಗಳು, ಜಾತಿಗಳು, ಮತಗಳು, ಮಠಗಳು, ಧರ್ಮ, ರಾಜಕೀಯ ಎಲ್ಲವೂ ಕರಾಳತೆಯ ರೂಪಗಳಾಗಿ ಮಾನವೀಯತೆಯನ್ನೇ ನುಂಗಿ ನೀರು ಕುಡಿದ ನರಕಗಳಾಗಿವೆ, ತಾವೇ ಸ್ವತಃ ನರಕಗಳಲ್ಲಿದ್ದು, ನರಕಗಳನ್ನು ಸೃಷ್ಟಿಸಿ, ಪಾದಪೂಜೆ ಮಾಡಿಸಿಕೊಳ್ಳುವ, ಮೆರೆಯುವ ಮಠಾಧಿಪತಿಗಳು. ಅಂತವರ ಕೊಳೆತ ಪಾದ ಹಿಡಿಯುವ, ಚಂದ್ರಶೇಖರ, ಪಟೇಲರಂತಹ ಇಬ್ಬಂದಿಗಳಿಂದ ಇಡೀ ರಾಷ್ಟ್ರದ ಪಾವಿತ್ರತೆ, ಶುದ್ಧತೆ ಹಾಳಾಗಿದೆ. ಇವುಗಳಲ್ಲಿ ಲೋಹಿಯಾವಾದಿಗಳೂ ಇರುವುದು ನನಗೆ ಸಂಕಟ.

ಇಂದಿನ ಸಮಾಜದ ಹಾಗೂ ದೇಶದ ಸಮಸ್ಯೆ ಗಂಜಿಗೇ ಗತಿಯಿರದ ಹಾಗೂ ಅದಕ್ಕೆ ಉಪ್ಪು ಇಲ್ಲದ್ದು. ನಮ್ಮ ಪರಿಹಾರ ಮಾರ್ಗ ಪಂಚತಾರಾ ಪ್ರಪಂಚದ್ದು. ವೇದಿಕೆಗೆ ಬೆತ್ತಲೆಯಾಗುವ ಕ್ಯಾಬರೆ ನಗ್ನ ನರ್ತನದ್ದು. ನಮ್ಮೆಲ್ಲ ಪಂಚವಾರ್ಷಿಕ ಯೋಜನೆಗಳೂ ಮಾನವನ ರಕ್ತ ಕುಡಿಯುತ್ತಿರುವ ನರಾಧಮರಿಗೆ, ಶಿಶು ಮಾಂಸವನ್ನು ಒದಗಿಸುವುದು.

ಇಂದಿಗೂ ನೀರಿಗೇ ಗತಿಯಿರದ ಹಳ್ಳಿ (ಹಾಗೂ ನಗರಳಲ್ಲಿ) ಗಳಲ್ಲಿ ಹೆಂಡ, ಸಾರಾಯಿಗಳ ಅಟ್ಟಹಾಸ. ಮಲವಿಸರ್ಜನೆಗಳಿಗೆ ಪ್ರಕೃತಿಯನ್ನೇ ಅವಲಂಬಿಸಬೇಕಾದ ಕರಾಳತೆ. ಇವುಗಳನ್ನೇ ಪ್ರಗತಿ ಎನ್ನೋಣವೇ ? ಮಾನವ ಶಕ್ತಿಯನ್ನು ಸಮಾಧಿ ಮಾಡುವ ಯಾಂತ್ರಿಕ ರಾಕ್ಷಸನ ಬೆಳವಣಿಗೆಯನ್ನೇ ಪ್ರಗತಿ ಎನ್ನೋಣವೇ ? ಮಲ ಮೂತ್ರಗಳ ಮೇಲೆಸೆಯುವ ಎಂಜಲೆಲೆಯ ಅನ್ನಕ್ಕೆ ನಾಯಿಗಳ ಕೂಡ ಜಗಳವಾಡುವ ಮಾನವರ ಹೆಚ್ಚಳವನ್ನು ಪ್ರಗತಿಯೆನ್ನೋಣವೇ ? ವರ್ಷ ವರ್ಷ ಹೆಚ್ಚಾಗುತ್ತಿರುವ ಬಡತನದ, ರೋಗ ರುಜಿನದ ಹೆಚ್ಚಳವನ್ನೇ ಪ್ರಗತಿ ಎನ್ನೋಣವೇ ? ಪ್ರಾಯ ಬದಲಾದ ಹಾಗೆಲ್ಲ, ಅಭಿಪ್ರಾಯದ ಬದಲಾವಣೆಯು ಅನಿವಾರ್ಯವೇ ? ಇಂತಹ ಇಬ್ಬಂದಿತನದ ದುರಂತ, ಸಿದ್ಧಾಂತಗಳ ಮಾರಣ ಹೋಮ ವಿಚಾರವಂತಿಕೆಯ ಕೊಲೆ.

ತನ್ನ 20ನೇ ವರ್ಷದ ಬಿಸಿರಕ್ತದ ಹರೆಯದಲ್ಲಿ ಇಡೀ ಪ್ರಪಂಚವನ್ನೇ ಪರಿವರ್ತಿಸ ಬಯಸುವ ಹೋರಾಟಗಾರ. ತನ್ನ 70ನೇ ಮುದಿತನದಲ್ಲಿ ಕಾರಣಗಳನ್ನಷ್ಟೇ ದೂರುತ್ತಾ ನೆನ್ನುವ ಪರಿಹಾಸ್ಯದಲ್ಲಿ ಹೆದರಿದ್ದರೂ ಸಹಾ ತಮ್ಮ ಪಲಾಯನ ವಾದದಿಂದ, ತಮ್ಮ ಮೈಮನಗಳನ್ನು ಬಿಸಿಮಾಡಿಕೊಂಡು, ಅದರಿಂದಾಗಿ ಹಳದಿ ಕಣ್ಣುಗಳಿಂದಲೇ ಲೋಹಿಯಾವಾದಿಗಳನಷ್ಟೇ ದೂರಿದ್ದಾರೆ, ಎನ್ನೋಣವೇ ? ಅವರ ದೃಷ್ಟಿಯಲ್ಲಿ ವಿಶಾಲಗೊಳಿಸುವುದು ಎಂದರೆ ಶರಣಾಗತಿಯಲ್ಲವಷ್ಟೆ ? ಗುರಿ ಹಾಗೂ ದಾರಿಗಳೆರಡ ರಲ್ಲೂ ಆಡಳಿತಗಾರರು ಮಾಡಿರುವ ಕರಾಳತೆಯಿಂದ ಈಗಾಗಲೇ ರಾಕ್ಷಸೀ

ರಾಜ್ಯವಾಗಿದೆ. ನಾವುಗಳೆಲ್ಲರೂ ಒಂದಲ್ಲ ಒಂದು ರೀತಿ ಗುಣ ಹಾಗೂ ಮೌಲ್ಯಗಳ ಮಾಲೀಕರಾಗದೆ ಹಣ ಹಾಗೂ ಅಧಿಕಾರದ ಗುಲಾಮರಾಗಿದ್ದೇವೆ.

20-2-85 —ಎನ್. ಈಶ್ವರ್

## ಪಾಪ ! ಬಾಪೂರವರೆ!!

ಗುನ್ನಾರ್ ಮಿರ್ಡಾಲರ ಏಷ್ಯನ್ ಡ್ರಾಮಾದಲ್ಲಿ ಆಚಾರ್ಯ ನರೇಂದ್ರದೇವ ರವರ ಪ್ರಸ್ತಾಪವೇ ಇಲ್ಲ ಅಂದಿದ್ದರೆ ಪಾಪ ! ಬಾಪು ಹೆದ್ದೂರ ಶೆಟ್ಟಿಯವರಿಗೆ ಮೈ ಉರಿಯುತ್ತಿರಲಿಲ್ಲವೇನೋ ? ಆದರೆ ಸ್ವರೂಪರಂ ಲೋಹಿಯಾ ಬಗ್ಗೆ ಪ್ರಸ್ತಾಪವಿಲ್ಲ ವೆಂದು ನರೇಂದ್ರ ದೇವರಿಗೆ ಮಾಡುವ ಅನ್ಯಾಯಕ್ಕಿಂತ ಮಿಗಿಲಾದ ಅನ್ಯಾಯವನ್ನು ಬಾಪು ಹೆದ್ದೂರ ಶೆಟ್ಟರಿಗೆ ಮಾಡಿದ್ದಾರೆ.

ನಾನು ಲೋಹಿಯಾವಾದಿ, ನಾನು ಮಾರ್ಕ್ಸ್‌ವಾದಿ ಎಂದು ಹೇಳಿಕೊಳ್ಳೋರನ್ನು ಕಂಡರೆ ತಲೆ ಮೇಲೆ ಬಟ್ಟೆ ಹಾಕ್ಕೊಂಡು ದೇಶಾಂತ್ರ ಓಡಿ ಹೋಗಿ ಬಿಡಾನ ಅನಿಸ್ತದೆ ನನಗೆ. ಇಂದು ಭಾರತ ಎದುರಿಸುತ್ತಿರುವ ಮಾತ್ರನೇ ಜಗತ್ತು ಎದುರಿಸುತ್ತಿರುವ ನಾನಾ ವಿಧನಾದ ಸಂಕೀರ್ಣ ಸಮಸ್ಯೆಗಳಿಗೆ ನಾನು ಇದು ಅದು ಎಂದು ಹೇಳಿಕೊಳ್ಳು ತ್ತಿರುವ ಎಲ್ಲರೂ ತಪ್ಪಿತಸ್ಥರು. ಪರಸ್ಪರ ಗುಮಾನಿಗಳನ್ನೇ ಅನ್ನ ನೀರು ಮಾಡಿ ಕೊಂಡಿರುವ ಈ ಜನ, ಈ ಜನರ ಕೊಂಕು ಕೆರೆನಾಟಗಳ ನೋಡಿದರೆ ನೆಲವಲ್ಲಿ ಮುಖ ಮುಚ್ಚಿಕೊಂಡು ಅಳಬೇಕನ್ನಿಸುತ್ತದೆ.

ಆಚಾರ್ಯ ನರೇಂದ್ರ ದೇವರಾಗಲೀ, ಲೋಹಿಯಾ ಆಗಲೀ ಯಾವ ಕಳ್ಳ ಘಂಟನ್ನೂ ಕದ್ದುಮುಚ್ಚಿ, ಹಂಚಿ ತಿಂದವರಲ್ಲ. ಕಳ್ಳ ಘಂಟನ್ನ ಹಂಚಿ ಹದ್ದುಗಳಂತೆ ಭಾರತದ ಮುಗಿಲ ತುಂಬಾ ಗಸ್ತು ಹೊಡೆದ ಕಾಂಗ್ರೆಗಳಾದರೂ ಕಂಡ ಕಂಡವರ ಕತ್ತು ಹಿಸುಕಲು ಒಂದಾಗಿರುವಾಗ, ನಮಗಿರುವುದು ಸಾಸಿವೆ ಕಾಳು ಗಾತ್ರದ ಮಾನ ಒಂಚೂರು ಮುಕ್ಕು ಹೋದರೆ ಜನ ಏನಂತಾರಪ್ಪಾ ನಮಗೇನೂ ಕಾಂಗ್ರೆಗಳ ತರ ಬೂದು ಗುಂಬಳ ಕಾಯಿ ಗಾತ್ರದ ಮಾನ ಇಲ್ಲ ಅಯ್ಯೋ ಬಿಡು ದೂರಕ್ಕೆ ಹೋದರೂ ಇನ್ನಾ ಬೇಕಾದಷ್ಟು ಇರತ್ತೆತೆ ಅಂದುಕೊಂಡಿರದ ಈ ನಮ್ಮ ಮಾರ್ಕ್ಸ್‌ವಾದೀ ಲೋಹಿಯಾವಾದಿಗಳೆಂಬ ಬನದ ಕರಡಿಗಳು ಒಂದಾಗಿ ಬರುತ್ತಿಲ್ಲ. ಇವರಿಗೆ ಜೋಮ ಅವಮಾನ ಪಾಲಿನ ರೊಟ್ಟಿಗಾಗಿ ಹೊಡೆದಾಟಕ್ಕಿಂತ ಅವರವರ ಅಜ್ಜಂದಿರ ಉತ್ತರೀ ಯಾವ ತೂತು ಕಾಸಿನ ಭಿನ್ನಾಭಿಪ್ರಾಯಗಳೇ ಜಾಸ್ತಿ! ಏನಾದರಾಗಲೀ ಬಾಪು! ಹೆದ್ದೂರ ಶೆಟ್ಟರು ಕಾಂಗ್ರೆಗಳ ತರಹ ಮಾತನಾಡುತ್ತಿರುವುದು ಮಲಿನವಾಗಿ ಹೋಗುತ್ತಿರುವ ನಮ್ಮ ಭದ್ರಾ ನದಿಯಷ್ಟೇ ಘೋರ ದುರಂತ.

ಬೆಳ್ದಿಂಗಳ ಅಂಗಳದಲ್ಲಿ ಕೈತುತ್ತು ಉಣಿಸುತ್ತಾ ಅವ್ವ ಕಥೆ ಹೇಳುತ್ತಿದ್ದಳು. "ನಾಲ್ಕು ಜನ ಹಠ ಮಾರಿ ಮಗುವೇ! ರೊಟ್ಟಿ ಬುತ್ತಿ ಕಟ್ಟಿಕೊಂಡು ಸತ್ಯವನ್ನ ಹುಡುಕುತ್ತಾ ಹೊರಟರು. ಮಧ್ಯಾನವಾಗುತ್ತಲೇ ಹಸಿವಾಯ್ತು. ಬಾವಿಯ ದಡದಲ್ಲಿ ಬುತ್ತಿ ಬಿಚ್ಚಿಕೊಂಡು ಕುಂತರು. ನೆಂಜಿಕೊಳ್ಳಲು ಈರುಳ್ಳಿ ಇರಲಿಲ್ಲ. ಹತ್ತಿರದ ಊರಿಗೆ ಹೋಗಿ ಯಾರು ಈರುಳ್ಳಿ ತರಬೇಕೆಂಬ ಬಗ್ಗೆ ತಗಾದೆ ಬಂತು. ನಾಕೂ ಜನರು ನಾ ಒಲ್ಲೆ, ಅಂತಾ ತಲೆ ಒದರಿದರು ಕೊನೆಗೊಂದು ತೀರ್ಮಾನಕ್ಕೆ ಬಂದರು. ರೊಟ್ಟಿ ಮುಂದಿಟ್ಟುಕೊಂಡು ಕೂರುವಾ, ಯಾರು ಮೊದಲು ಮಾತನಾಡುತ್ತಾರೋ ಅವರು ಹೋಗಿ ಈರುಳ್ಳಿ ತರಬೇಕು ಅಂತ.

ಒಂದು ಘಳಿಗೆ ಆಯ್ತು! ಎರಡು ಘಳಿಗೆ ಆಯ್ತು, ಮೂವತ್ತೆಂಟು ಘಳಿಗೆ ಆಗಿಹೋಯ್ತು. ಯಾರೂ ಮಾತಾಡಲಿಲ್ಲ, ನಿದ್ದೆ ಮಾಡಬೇಡ ಕೇಳು ಮಗುವೇ! ಒಂದು ನಾಯಿ ಬಂತು, ಬಂದಿದ್ದೇ ನಾಲ್ಕೂ ಜನರ ರೊಟ್ಟಿ ತಿಂತು. ಆವಾಗಲೂ ಬಾಯಿ ಬಿಡಲಿಲ್ಲ. ನಾಯಿಯೂ ಕಾಲನ್ನ ಎತ್ತಿ ಒಬ್ಬನ ಮೇಲೆ ಹುಚ್ಚೆ ಸುರಿದು ತನ್ನ ದಾರಿ ಹಿಡಿಯಿತು. ಆಗ ಅವನು ಇಸ್ಸೀ ಅಂದ. ಇಸ್ಸೀ ಅಂದವನು ಹೋಗಿ ಈರುಳ್ಳಿ ತರಬೇಕೆಂದು ಉಳಿದ ಮೂವರೂ ತಕರಾರು ಮಾಡಿದರು. ಅವನು ಈರುಳ್ಳಿ ತರಲಿಕ್ಕೆ ಹೋದ.

ಉಳಿದ ಮೂವರಲ್ಲಿಯೂ, ನಾಯಿ ಬರಲು ಇಬ್ಬರಲ್ಲಿ ಒಬ್ಬ ಕಾರಣನೆಂದು ಗುಮಾನಿ ಪಡುತ್ತಾ ದ್ವೀಪಗಳಾಗಿ ಹೋದರು. ಆ ದ್ವೀಪಗಳಲ್ಲಿ ನೆರೆ ಬಂತು ಕುತ್ತಿಗೆ ತನಕ ನೀರು ಉಕ್ಕಿತು. ಆಗ ಮಗುವೇ ಅವರು ಕಾಪಾಡಿ ಎಂದು ಕೂಗ ತೊಡಗಿದರು.

—ಎಲ್ಸಿ. ನಾಗರಾಜು

ಓದಿ:

ಸಾಹಿತ್ಯ ತತ್ವ: ಬೇಂದ್ರೆ ದೃಷ್ಟಿ—ಕೆ. ವಿ. ನಾರಾಯಣ
ಮಾತು—ಮಾಟ (ಕವನ ಸಂಕಲನ) ರಾಮಚಂದ್ರಶರ್ಮ



# ಕನಸಿಗೊಂದು ಕಣ್ಣು

## ನಮ್ಮ ಮಾಸ್ತಿ

ಮನುಷ್ಯ ಸಂಬಂಧಗಳು ಯಾವ ಯಾವ ಹಂತದಲ್ಲಿ ತನ್ನ ಕೊಂಡಿಗಳನು ಸಿಕ್ಕಿಸಿಕೊಂಡಿರುತ್ತೆ ಎನ್ನುವುದನ್ನು ಹೇಳುವುದು ಕಷ್ಟ. ಒಮ್ಮೆ ಹೇಳಿದಾಗ ಸತ್ಯ ವಾಗಿರಬಹುದು. ನಂತರ ಸ್ವಲ್ಪ ಸಮಯ ಬಿಟ್ಟು ಹಿಂದಿರುಗಿ ನೋಡಿದಾಗ ಅದು ಕೃತಕವಾಗಿಯೋ ಅಥವಾ ಸುಳ್ಳಾಗಿರಲು ಸಾಧ್ಯ. ಈ ದೃಷ್ಟಿಯಿಂದ ನಿಜವಾಗಿಯೂ ಒಬ್ಬ ಮನುಷ್ಯನ ಬಗ್ಗೆ ಬೆಲೆಕಟ್ಟಲು ಸಾಧ್ಯವಾ ಅಂದುಕೊಂಡಿದ್ದೇನೆ. ಹೀಗೆ ಅಂದು ಕೊಳ್ಳುತ್ತಲೇ ಬೆಲೆಕಟ್ಟುವ ಮೊತ್ತದ ಸ್ವರೂಪ ಸಡಿಲಗೊಳ್ಳಲೂ ಬಹುದು. ಬಿಗಿ ಗೊಳ್ಳಲೂಬಹುದು. ಯಾಕೆಂದರೆ ಇಂಥ ವಾತಾವರಣವನ್ನು ಕಂಡಾಗ ತರ್ಕದ ಜೊತೆ ಪಾಲೊಲಾಗಿ ಮತ್ತೆ ಹೊರಗೆ ಬರುವುದು ಎಷ್ಟೊಂದು ತ್ರಾಸದಾಯಕ ಎಂಬುದು ಗೋಚರಿಸಿದ್ದು : ಫೆಬ್ರವರಿ ಮೊದಲನೆ ವಾರದಲ್ಲಿ ಮಾಸ್ತಿಯವರ ಬಗ್ಗೆ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದವರು ನಡೆಸಿದ ಮೂರು ದಿನಗಳ ವಿಚಾರ ಸಂಕಿರಣ ದಿಂದ ಒಂದು ರೀತಿಯ ಅವ್ಯಕ್ತ ಭಾವನೆಗಳನ್ನು ಅನುಭವಿಸಲು ಸಾಧ್ಯವಾಯಿತು. ಹಾಗೆ ನೋಡಿದರೆ ನಾನು ಇಲ್ಲಿಯವರೆವಿಗೂ ಭಾಗವಹಿಸಿದ ಅರ್ಥಪೂರ್ಣ ವಿಚಾರ ಸಂಕಿರಣಗಳಲ್ಲಿ ಒಂದು. ಒಬ್ಬ ಮನುಷ್ಯನ ಮತ್ತು ಅವನ ಸಾಹಿತ್ಯದ ಸುತ್ತ ಅತ್ಯಂತ ಆತ್ಮೀಯತೆಯಿಂದಲೋ ಅಥವಾ ದ್ವೇಷದಿಂದಲೋ ಅಥವಾ ಅನಾಧರಣೆಯಿಂದಲೋ ಚಿಂತಿಸಲು ತೊಡಗಿದಾಗಲೂ ; ಜೀವನದಲ್ಲಿ ಸಂಕೀರ್ಣವಾಗಿ ಮನೆಮಾಡಿಕೊಂಡಿರುವ ಅವನ ಸಂಬಂಧಗಳನ್ನು ಪರಿಪೂರ್ಣವಾಗಿ ಹಿಡಿಸಿದೆವೆಯೇ ? ಎಂಬ ಪ್ರಶ್ನೆ ಉಳಿದು ಬಿಡಬಹುದೇನೋ ಅನಿಸುತ್ತೆ.

ಒಬ್ಬ ವ್ಯಕ್ತಿ ತನ್ನ ಬರವಣಿಗೆಯ ಮೂಲಕ ವ್ಯಕ್ತವಾಗುವುದು ಬೇರೆ. ಸ್ವಂತ ಬದುಕಿನ ಮೂಲಕ ವ್ಯಕ್ತವಾಗುವುದು ಬೇರೆ. ಇವೆರಡೂ ಸದಾ ಒಂದರ

ಕೊಂಡಿಯನ್ನು ಒಂದು ಬಿಡದೆ ನಿರಂತರ ಅಪ್ಪಿಕೊಂಡಿರುತ್ತೆ ಎಂದು ಹೇಳಲಾಗುವುದಿಲ್ಲ. ಈ ದೃಷ್ಟಿಯಿಂದ ನಾವು ಒಬ್ಬ ಮಹಾನ್ ಸಾಹಿತಿ ಅಥವಾ ವ್ಯಕ್ತಿಯ ಬಗ್ಗೆ ಪೂರ್ವ ರೂಪಿತ ಕಲ್ಪನೆಗಳು ಆದರ್ಶದ ಚೌಕಟ್ಟಿನಲ್ಲಿಯೇ ಸಜೀವವಾಗಿರುತ್ತೆ ಎಂದು ಹೇಳ ಲಾಗುವುದಿಲ್ಲ. ಹಾಗೆಯೇ ಯಾವ ಮನುಷ್ಯನೂ ನನ್ನಂತೆಯೇ ಬದುಕಬೇಕಾಗಿಲ್ಲ ಎಂದುಕೊಂಡಾಗ ನಮ್ಮ ಮುಂದಿರುವ ವ್ಯಕ್ತಿ ಇಲ್ಲವೇ ನಮ್ಮ ನಡುವೆ ಬರೆಯುವ ವ್ಯಕ್ತಿ ಎಸೆಯುವ ಸವಾಲುಗಳು ಒಬ್ಬನ ಮನಸ್ಥಿತಿಯನ್ನು ಜಾಗೃತವಾಗಿಡಲು ಸಾಧ್ಯವಿರಬಹುದು.

ಮಾಸ್ತಿಯವರ ಬಗ್ಗೆ ವಿಚಾರ ಸಂಕಿರಣದಲ್ಲಿ ಚರ್ಚೆ ನಡೆಯುವಾಗಲೆಲ್ಲ ನನ್ನ ಮೆದುಳಿನ ಒಂದು ಭಾಗ ಎರಡು ವರ್ಷಗಳ ಹಿಂದೆ ಮೂರುದಿನ ಮಾಸ್ತಿಯವರೊಡನೆ ಅನುಭವಿಸಿದ ನೆನಪಿನ ಜೊತೆ ಕಸರತ್ತು ನಡೆಸಿತ್ತು. ಬಿಡಿಸ ಬೇಕೆಂದರೆ ; ಮುದಡಿ ಕೊಂಡಿದ್ದ ರೆಕ್ಕೆ ಪುಕ್ಕಗಳಿಗೆ ಜೀವ ಬಂದು ಹಾರಾಡತೊಡಗಿತ್ತು.

ನವಂಬರ್ ತಿಂಗಳ ಒಂದು ಸಂಜೆ ಸಾಕಷ್ಟು ಚಳಿ ಇತ್ತು. ಹಿರಿಯ ಗೆಳೆಯ ರಾದ ನೀಲಿಯವರ ಮನೆಗೆ ಹೋದೆ. ಹಳೆಯ ಮನೆ ಹೊಸರೂಪವನ್ನು ಪಡೆದು ಮಧ್ಯಮ ವರ್ಗದವರ ಮನಸ್ಸಿಗೆ ಸಂತೃಪ್ತಿಯನ್ನು ನೀಡುವ ಪುಟ್ಟ ಅರಮನೆಯಾಗಿ ರೂಪುಗೊಂಡಿತ್ತು. ನೀಲಿಯವರು ಪ್ರೀತಿಯಿಂದ ಮನೆಯನ್ನು ತೋರಿಸುತ್ತ ಬಂದರು. ಉಪ್ಪರಿಗೆಯ ಮೇಲೆ ಕರೆದುಕೊಂಡು ಹೋದರು. ಸಂಜೆಯ ಚಳಿಯ ಗಾಳಿಗೆ ಮೈಯೊಡ್ಡಿ ಪಕ್ಕದ ರಸ್ತೆಗೆ ಕಣ್ಣಾಡಿಸಿದಾಗ ನೂರಾರು ಜನ ಹೆಂಗಸರು ಗಂಡಸರು ಹಣ್ಣು ತರಕಾರಿಗಳನ್ನು ಕೊಳ್ಳುವುದರಲ್ಲಿ ಚೌಕಾಸಿ ನಡೆಸಿದ್ದರು. ಚೌಕಾಸಿ ನಡೆಸುವುದೂ ಮನುಷ್ಯನ ಮೂಲಭೂತ ಸಂಬಂಧವೂ ಇರಬಹುದು.

ನೀಲಿಯವರ ಮನೆಯಲ್ಲಿ ಟೀ ಕುಡಿದು ಹೊರಗೆ ರಸ್ತೆಗೆ ಬಂದಾಗ ಬಿಯರ್ ಕುಡಿಯುವ ಯೋಜನೆ ಸಿದ್ಧವಾಯಿತು. ನೀಲಿಯವರು ಓಡಿದರು. ಬಟ್ಟೆ ಬದಲಾ ಯಿಸಿ ಬಂದರು. ಬಸವನಗುಡಿ ಕ್ಲಬ್ಬಿಗೆ ಬಂದಾಗ ಏಳು ಗಂಟೆಯಾಗಿತ್ತು. ಮಾಸ್ತಿ ಯವರ ನೆನಪಾಯಿತು. 94 ವರ್ಷದ ಮುದುಕ ಈಗೆಲ್ಲಿ ಕಾರ್ಡ್ಸ್ ಆಡಲು ಬಂದಿರುತ್ತೆ ಎಂದು ನನ್ನ ಪಾಡಿಗೆ ನಾನು ಅಂದುಕೊಂಡರೂ ; ಯಾಕೆ ಬಂದಿರಬಾರದು ಎಂಬ ಮತ್ತೊಂದು ಪ್ರಶ್ನೆ ಜೊತೆಯೇ ಇತ್ತು.

ಒಂದಷ್ಟು ಬಿಯರ್ ಕುಡಿಯಲು ತೊಡಗಿದೆವು. ಸ್ವಲ್ಪ ತಣ್ಣನೆಯ ಬಿಯರ್‌ಗೆ ಬ್ರಾಂದಿಯನ್ನು ಮಿಕ್ಸ್‌ಮಾಡಿಕೊಂಡೆ. ಅದು ನನ್ನ ರುಚಿಯಾಗಿತ್ತು. ಡ್ರಿಂಕ್ಸ್‌ನ ತಣ್ಣನೆಯ ಮತ್ತು ಬಿಸಿಯ ನಡುವೆ ಮಾತುಕತೆ ಸಾಗಿತ್ತು. ಮಾಸ್ಟರ್ ಹಿರಣ್ಣಯ್ಯ

ಬಂದರು. ಆರತಿ ನಾಲ್ಕೈದು ಬಾರಿ ಬಂದು ಹೋದರು. ಯಾವ ರೀತಿಯಲ್ಲಿ ಬಂದು ಹೋದರು ಎಂಬುದು ಅಪ್ರಸ್ತುತ. ಆದರೆ ನೀಲಿಯವರ ಸ್ವಾರಸ್ಯಪೂರ್ಣವಾದ ಮಾತುಗಳ ನಡುವೆ ಮಾಸ್ಟರ್ ಹಿರಣ್ಣಯ್ಯನವರನ್ನು ನೋಡಲು ಆಸೆಯಾಯಿತು.

ಆಕಸ್ಮಿಕವಾಗಿ ತಲೆಯೆತ್ತಿ ಹೊರಗೆ ನೋಡಿದೆ. ಆಶ್ಚರ್ಯವಾಯಿತು. ಅದೇ ಉದ್ದನೆಯ ಕೋಟಿನ, ಕಪ್ಪು ಟೋಪಿಯ ಕುತ್ತಿಗೆಗೆ ಒಂದು ಸುತ್ತು ಬಂದಿರುವ ಮಫ್ಲರ್ ಹಾಗೂ ಕೈಯಲ್ಲಿ ಸಾಮಾನ್ಯ ಬೆತ್ತ ಹಿಡಿದು ಕಾರಿನ ಹತ್ತಿರ ನಿಂತಿದ್ದರು ಮಾಸ್ತಿ. ಸಮಯ ನೋಡಿಕೊಂಡೆ ಎಂಟೂಕಾಲು ಆಗಿತ್ತು. ಎದ್ದು ಮಾತಾಡಿ ಬರುವ ಆಸೆಯಾಯಿತು. ಆದರೆ ಕುಡಿದಿದ್ದರಿಂದ ಮಾತಾಡಿಸುವ ಧೈರ್ಯ ಬರಲಿಲ್ಲ. ಮಾಸ್ತಿ ತನ್ನ ಕಳಿಸಲು ಬಂದ ಹುಡುಗರ ಬೆನ್ನು ಸವರಿ ಹೊರಟರು. ಈ ಮನುಷ್ಯನ ಬದುಕಿನ ಶ್ರೀಮಂತಿಕೆಯ ಬಗ್ಗೆ ಯೋಚಿಸುತ್ತಲೇ ಕುಡಿದು ಮನೆಗೆ ಬಂದೆ. ತಿಂದು ಮಲಗಿದೆ. ಆದರೆ ಎಷ್ಟೋ ಸಮಯದವರೆವಿಗೂ ಮಾಸ್ತಿ ನಿದ್ದೆಹೋಗಲು ಬಿಡಲಿಲ್ಲ. ಕನ್ನಡದ 'ಆಸ್ತಿ'ಯ ಬಗ್ಗೆ ಯೋಚಿಸಿದಂತಲ್ಲ (ಯೋಚನೆಗೆ ಪ್ರಾಸವಿರಲಿಲ್ಲ) ನಿಜವಾಗಿಯೂ ಶ್ರೀನಿವಾಸ ಕನ್ನಡದ ಆಸ್ತಿ ಎಂದುಕೊಂಡೇ ಮಲಗಿದ್ದೆ. ಯಾಕೆಂದರೆ ಒಮ್ಮೆ ಒಬ್ಬ ವ್ಯಕ್ತಿ ಸಾಂಸ್ಕೃತಿಕವಾಗಿ ಬೆಳೆದ ಮೇಲೆ ಆ ವ್ಯಕ್ತಿ ತನ್ನ ಸಂಸ್ಕೃತಿಯ ಮತ್ತು ತನ್ನ ಜನರ ಆಸ್ತಿಯೇ ಆಗಿರುತ್ತಾನೆ, ಇದೇ ಮಾತನ್ನು ಬೇಂದ್ರೆಯವರ ಮಗನಿಗೆ ಬರೆಯುವ ಸಂದರ್ಭ ಬಂದಿತ್ತು. (ಬೇಂದ್ರೆಯವರ ಮಗ ವಾಮನ ಬೇಂದ್ರೆ ಇರಬಹುದು. ಇತ್ತೀಚೆಗೆ ಅಪ್ಪನ ಆಸ್ತಿಯನ್ನು ಖುಷಿಯಿಂದ ಪ್ರಿಂಟ್ ಮಾಡಿಸುತ್ತ ಕೆಟ್ಟ ಕೆಟ್ಟ ಮುನ್ನುಡಿ ಬರೆಯುತ್ತ ಬದುಕುತ್ತಿದ್ದಾರಂತೆ.)

ಬೇಂದ್ರೆಯವರ ಬಗ್ಗೆ ಶೂದ್ರ ವಿಶೇಷಾಂಕ ಬಂದಾಗ; ಯಾವುದೋ ಒಂದು ರಾತ್ರಿ ಮನೆಗೆ ತಡವಾಗಿ ಹೋದಾಗ; ಒಂದಷ್ಟು ಪತ್ರಗಳ ನಡುವೆ ವಾಮನ ಬೇಂದ್ರೆಯವರ ಪತ್ರವಿತ್ತು. ಉತ್ಸಾಹದಿಂದ ಪತ್ರ ತೆರೆದೆ. ಪತ್ರದುದ್ದಕ್ಕೂ ಆಕ್ಷೇಪಣೆ. ನಾನು ನಮ್ಮ 'ಬೇಂದ್ರೆ'ಯ ಮಗನ ಅನುಮತಿಯನ್ನು ಪಡೆಯದೆ ಶೂದ್ರ ತಂದಿದಕ್ಕೆ. ಅದಕ್ಕಿಂತ ಮಿಗಿಲಾಗಿ ರಾಯಲ್ಟಿ ಕೊಡದಿದ್ದುದಕ್ಕಾಗಿ. ಪತ್ರ ಮನಸ್ಸನ್ನು ಕೆಡಿಸಿತ್ತು, ಒದ್ದಾಡುತ್ತ ಮಲಗಿದೆ. ಅಮೃತರಾಯ್ ನೆನಪಿಗೆ ಬಂದರು. * "ಹೇಗೆ ನಮ್ಮಪ್ಪ (ಪ್ರೇಮ್‌ಚಂದ್)ನ ಕೃತಿಗಳಿಂದ ಜೀವನದುದ್ದಕ್ಕೂ ನನ್ನ ಸೋದರನೊಡನೆ ಆರೋಗ್ಯಪೂರ್ಣ ಸಂಬಂಧವನ್ನು ಇಟ್ಟುಕೊಳ್ಳಲಾಗಲಿಲ್ಲವೆಂದರು. ಯಾಕೆಂದರೆ ಅಪ್ಪನ ಕೃತಿಗಳಿಂದ ಬರುವ ರಾಯಲ್ಟಿಗಾಗಿ ಕೋರ್ಟಿಗೆ ಹೋಗುವ ಸಣ್ಣ ಕೆಲಸವನ್ನು ಮಾಡಿ

---

* ಮೂರು ವರ್ಷಗಳ ಹಿಂದೆ ಅಮೃತ್‌ರಾಯ್ ಬೆಂಗಳೂರಿಗೆ ಬಂದಿದ್ದಾಗ ಭೇಟಿಯಾಗುವ ಅವಕಾಶ ಸಿಕ್ಕಿತ್ತು. ಅಮೃತ್‌ರಾಯ್ ತಂದೆಯಷ್ಟೇ ಹಿಂದಿಯಲ್ಲಿ ಗಟ್ಟಿಯಾದ ಲೇಖಕ.

ದ್ದವು. ಕೊನೆಗೆ ಎಲ್ಲವನ್ನು ಸೋದರನಿಗೆ ಬರೆದುಕೊಟ್ಟೆ, ಬರೆದು ಬದುಕುವುದು ನನಗೆ ಗೊತ್ತಿದ್ದುದರಿಂದ"ಎಂಬ ರಾಯ್‌ರವರ ಮಾತುಗಳು,

ವಾಮನ ಬೇಂದ್ರೆಗೆ ಪತ್ರ ಬರೆದಾಗ ; "ಬೇಂದ್ರೆ ನಿಮ್ಮ ತಂದೆಯವರಿರಬಹುದು ಆದರೆ ಅದಕ್ಕಿಂತ ಮಿಗಿಲಾಗಿ ಅವರು ಸಾಂಸ್ಕೃತಿಕವಾಗಿ ನಮ್ಮ ಆಸ್ತಿ. ಆದ್ದರಿಂದ ನಿಮ್ಮ ಅನುಮತಿಯನ್ನು ಕೇಳುವ ಅಥವಾ ಕೇಳಬೇಕಾದ ಪ್ರಶ್ನೆಯೇ ಉದ್ಭವಿಸುವುದಿಲ್ಲ" ಎಂದು ಸೇರಿಸಿದ್ದೆ. ಈ ಮಾತನ್ನು ಎತ್ತುತ್ತಿರುವುದು 'ಮಾಸ್ತಿ' ನಮ್ಮ ಸಾಂಸ್ಕೃತಿಕ ಆಸ್ತಿ ಎಂಬುದಕ್ಕಾಗಿ. ಮಾಸ್ತಿ ಕನ್ನಡದ ಆಸ್ತಿ ಎಂಬುದನ್ನು ಪ್ರಾಸದ ಚೌಕಟ್ಟಿನಲ್ಲಿ ಮಾಡಬೇಕಾಗಿಲ್ಲವೇನೋ. ಅದೇನೇ ಇರಲಿ: ಅವರನ್ನು ಭೇಟಿಯಾದ ಆ ಎರಡು ಮೂರು ದಿನಗಳಲ್ಲಿ 'ಮಾಸ್ತಿ' ಥ್ರಿಲ್ಲಿಂಗ್‌ನ ವಿಷಯವಾಗಿದ್ದರು. (ಲಂಕೇಶ್ ಮತ್ತು ಅನಂತಮೂರ್ತಿಯವರೊಡನೆ ಇರುವಾಗ ಈ ಥ್ರಿಲ್ಲಿಂಗ್‌ನ ಮೊತ್ತ ಸ್ವಲ್ಪ ಜಾಸ್ತಿಯಾಗಿರಬಹುದು.

ಎರಡು ವರ್ಷಗಳ ಹಿಂದಿನ ಮಾತು. ಬೆಳಿಗ್ಗೆ ಹತ್ತು ಘಂಟೆಯ ಸಮಯ. ಎಳೆ ಬಿಸಿಲು ಟ್ರಿಮ್ಮಾಗಿ ಓಡಾಡುವುದಕ್ಕೆ ಅವಕಾಶವನ್ನು ಉಳಿಸಿಕೊಂಡಿತ್ತು. ಮಾಸ್ತಿಯವರನ್ನು ನೋಡಲು ಹೊರಟೆ. ಹನುಮಂತನಗರ ತಲುಪಿದೆ. ಆ ಪ್ರದೇಶ ಚಿರಪರಿಚಿತವಾದರೂ ಮಾಸ್ತಿಯವರ ಮನೆಯನ್ನೇ ನೋಡಿರಲಿಲ್ಲ. ನೋಡಿದ್ದರೂ; ಇದೇ ಮಾಸ್ತಿಯವರ ಮನೆ ಎಂದು ಕಣ್ಣಾಡಿಸುವ ಗೋಜಿಗೆ ಹೋಗಿರಲಿಲ್ಲ. ಆದರೂ ಮಾಸ್ತಿಯವರ ಮನೆಯನ್ನು ಹುಡುಕುವುದು ಕಷ್ಟವಾಗುವುದಿಲ್ಲ ಎಂದೇ ಹೊರಬಿದ್ದುದು.

ಬಸ್ಸಿಳಿದು ಸ್ವಲ್ಪ ದೂರ ಹೋಗಿದ್ದೆ. ದೂರದಲ್ಲಿ ಹನುಮಂತರಾಯನ ಗುಡ್ಡದ ಕಡೆಯಿಂದ ಬರುತ್ತಿದ್ದರು. ಅದೇ ಮಾಮೂಲಿ ಉಡುಪು. ಮಾಮೂಲಿ ಚಿತ್ರ. ಮೇಸ್ಟ್ರು ಹುಡುಗರನ್ನು ಬಡಿಯುವ. ಯಜಮಾನ ಸೇವಕನನ್ನು ಬಡಿಯುವ ಅಥವಾ ಗಂಡ ಹೆಂಡತಿಯನ್ನು ಬಡಿಯುವ ಚಿತ್ರವಾಗಿರಲಿಲ್ಲ. ವೃದ್ಧಾಪ್ಯದಲ್ಲಿ ಸದಾ ಆತ್ಮೀಯ ಗೆಳೆಯನಂತಿರುವ ಚಿತ್ರ ಅದಾಗಿತ್ತು. ಬೆನ್ನುಬಗ್ಗದ ಮಾಸ್ತಿ ಚಿತ್ರದ ಮೇಲೆ ತೂಕವನ್ನೇನು ಬಿಟ್ಟು ನಡೆದು ಬರುತ್ತಿರಲಿಲ್ಲ.

ಮಾಸ್ತಿ ಹತ್ತಿರ ಹತ್ತಿರ ಬಂದರು. ನನ್ನ ಮಾಮೂಲಿ ಸಂಕೋಚಗಳಿಂದ ದೇಹ ಬಿಗಿಯಾಯಿತು. ಮಾಸ್ತಿ ಹತ್ತಿರ ಬಂದೇಬಿಟ್ಟರು. ನಮಸ್ಕರಿಸಿದೆ. ಕೈಯೆತ್ತಿ ನಮಸ್ಕರಿಸಿದರು. ಹೆಸರು ಕೇಳಿದರು. 'ಶೂದ್ರ ಶ್ರೀನಿವಾಸ್' ಎನ್ನಲಿಲ್ಲ. 'ಶ್ರೀನಿವಾಸ್' ಎಂದೆ. ಕೆಲಸ ಕೇಳಿದರು. 'ಶೂದ್ರ' ತರುತ್ತಿರುವ ವಿಷಯ ತಿಳಿಸಿದೆ, ಸಟೆದ್ದು

ನಿಂತರು. ನನ್ನನ್ನೇ ದಿಟ್ಟಿಸಿ ನೋಡಿದರು. ಬ್ರಾಹ್ಮಣ ದ್ವೇಷದ ಯಾವ ಪಳೆಯುಳಿಕೆಗಳು ನನ್ನ ಮುಖದಲ್ಲಿ ಗೋಚರಿಸಲಿಲ್ಲ ಎಂದು ಕಾಣುತ್ತೆ. ಬೆನ್ನ ಮೇಲೆ ಕೈಯಾಡಿಸುತ್ತ : "ಈ ಬ್ರಾಹ್ಮಣ—ಶೂದ್ರ ಯಾಕಪ್ಪ ?" ಎಂದರು. ನಗುತ್ತ ಅವರೊಡನೆ ನಡೆದಿದ್ದೆ. "ರಾಜಕೀಯ ವ್ಯಕ್ತಿಗಳ ರೀತಿಯಲ್ಲಿ ನಾವು ಜಾತಿಯ ಬಗ್ಗೆ ಯೋಚಿಸಬಾರದು" ಎಂದರು. "ಹೌದು" ಎಂದು ನಡೆದಿದ್ದೆ. ರಸ್ತೆಯಲ್ಲಿ ಗಾಜಿನ ಚೂರುಗಳು ಸಾಕಷ್ಟು ಬಿದ್ದಿದ್ದುವು. ಬಗ್ಗಿ ಒಂದೊಂದನ್ನೇ ತೆಗೆಯ ತೊಡಗಿದರು. ಆ ಚೂರುಗಳಿಗೆ ನಾನೂ ಕೈಹಾಕಲು ಮನಸ್ಸು ಸಿದ್ಧವಾಗುವ ಸಮಯಕ್ಕೆ ಮಾಸ್ತಿ ಸಾಕಷ್ಟು ತೆಗೆದಿದ್ದರು. ನಾಚಿಕೆಯಾಯಿತು. ಗಾಂಧೀಜಿಯವರು ಮೊದಲನೆಯ ಬಾರಿಗೆ ಹೋರಾಟದ ಪಾಠಗಳಲ್ಲಿ ಸ್ವಯಂ ಸೇವಕರಿಗೆ ಹೇಳದೆ ತಾವೇ ಕಕ್ಕಸ್ಸು ಗುಂಡಿಗಳನ್ನು ಶುದ್ಧಿ ಮಾಡಲು ಹೋದಾಗ : ಸ್ವಯಂಸೇವಕರು ನಾಚಿಕೆಪಟ್ಟುಕೊಂಡು ಮುನ್ನುಗ್ಗಿದ ದೃಶ್ಯ ಮುಂದೆ ನಿಂತಿತ್ತು.

ಮುಂದೆ ನಡೆದಿದ್ದರು ಮಾಸ್ತಿ. "ಹಳ್ಳಿಯಲ್ಲಿ ಯಾರೂ ಜಾತೀಯತೆಯ ಮೇಲೆ ಬದುಕುವುದಿಲ್ಲ. ಇತ್ತೀಚೆಗೆ ನಮ್ಮ ರಾಜಕೀಯದೋರು ಹೋಗಿ ಜಾತೀನ ಬಿತ್ತಿದ್ದಾರೆ" ಎನ್ನುವ ಸಮಯಕ್ಕೆ ಪುಟ್ಟ ಹುಡುಗನೊಬ್ಬ ಓಡಿ ಬಂದ. ಮಾಸ್ತಿಯವರು ಆ ಹುಡುಗನ ತಲೆ ಸವರಿ ಜೇಬಿಗೆ ಕೈಯಿಟ್ಟು ಚಾಕಲೇಟ್ ತೆಗೆದುಕೊಟ್ಟರು. ಹುಡುಗ ಬೈಬೈ ಹೇಳಿ ಓಡಿದ. ಇನ್ನೂ ಸ್ವಲ್ಪ ದೂರ ಹೋದ ಮೇಲೆ ಹುಡುಗಿಯೊಬ್ಬಳು ಓಡಿ ಬಂದಳು. ಅವಳಿಗೊಂದು ಚಾಕಲೇಟ್ ಸಿಕ್ಕಿತು. ಮತ್ತಷ್ಟು ದೂರ ಹೋದಾಗ ಮತ್ತೊಂದು ಪುಟ್ಟ ಹುಡುಗಿ "ತಾತಾತಾ" ಎನ್ನುತ್ತ ಬಂದು ಕೈ ಹಿಡಿಯಿತು. ಜೇಬಿಗೆ ಕೈಯಿಟ್ಟರು. ಚಾಕಲೇಟ್ ಮುಗಿದಿತ್ತು ಎಂದು ಕಾಣುತ್ತೆ; ಅವಳ ಕೆನ್ನೆ ಸವರಿ ನಾಳೆ ಕೊಡುತ್ತೇನೆಂದರು. ಆ ಮಗು ಪ್ರೀತಿಯಿಂದ 'ಆಗಲಿ ತಾತಾ' ಎಂದು ಓಡಿತು. "ಪಾಪ ! ಮುದ್ದು ಮಕ್ಕಳು" ಎಂದರು ಮಾಸ್ತಿ.

ಇದಾದನಂತರ ನಾಲ್ಕು ಮಾರು ದೂರ ಹೋಗಿರಲಿಲ್ಲ. ಯೌವನ ತುಂಬಿ ತುಳುಕುತ್ತಿದ್ದ ಹುಡುಗಿಯೊಬ್ಬಳು ಗಡಿಬಿಡಿಯಿಂದ ಬಂದು ಕಾಲಿಗೆ ನಮಸ್ಕರಿಸಿದಳು. ಹೊಸದಾಗಿ ಮದುವೆಯಾದ ಹುಡುಗಿ ಎಂದು ಕಾಣುತ್ತೆ; ಜೀವನೋತ್ಸಾಹ ಆ ಹುಡುಗಿಯಲ್ಲಿ ತುಂಬಿತ್ತು. ಯಾಕೆಂದರೆ ಮದುವೆಯ ಹೊಸದರಲ್ಲಿ ನಮ್ಮ ಹುಡುಗಿಯರು ಸದಾ ಜೀವನ ಹೀಗೆಯೇ ಇರುತ್ತದೆಂದು ತಿಳಿದಿರುತ್ತಾರೆ. (ಇತ್ತೀಚೆಗೆ ಕಾದಂಬರಿಗಳನ್ನು ಓದಿಕೊಂಡ ಅಥವಾ ಚಲನಚಿತ್ರ ನೋಡಿದ ಹುಡುಗಿಯರಲ್ಲಿ.) ಅಷ್ಟರಲ್ಲಿ ಹುಡುಗಿಯ ಅಮ್ಮ ಎಂದು ಕಾಣುತ್ತೆ : ಹೊರಬಾಗಿಲಲ್ಲಿ ನಿಂತಿದ್ದರು ಮಾಸ್ತಿಯವರನ್ನು ಒಳಗೆ ಕರೆದರು. ನನ್ನ ಹೆಗಲ ಮೇಲೆ ಕೈಹಾಕಿ [illegible] ಕರೆದರು. ನಡೆದೆ. ಆ ಹುಡುಗಿ ಉತ್ಸಾಹದಿಂದ ಒಳ ನಡೆದಳು. ಅವಳ

ಕಾಲಿನಲ್ಲಿದ್ದ ಇನ್ನೂ ಹೊಸದ ಬೆಳ್ಳಿಯ ಗೆಜ್ಜೆಗಳು, ಆ ನಡಿಗೆಗೆ ಅಥವಾ ಓಟಕ್ಕೆ ಮತ್ತಷ್ಟು ಜೀವ ತುಂಬಿತ್ತು.

ಮನೆಯೊಳಕ್ಕೆ ಹೋದೆವು. ಅದೊಂದು ಪುಟ್ಟ ಮನೆ. ಮಾಸ್ತಿ ಕುಳಿತುಕೊಂಡರು. ನಾನೂ ಅವರ ಹತ್ತಿರದಲ್ಲಿಯೇ ಇದ್ದ ಕುರ್ಚಿಯಲ್ಲಿ ಕೂತೆ. ಏನೇನೋ ವಿಚಾರಿಸಿದರು. ಹುಡುಗಿಯ ಮದುವೆ ಆದ ವಿಷಯ ಬಂತು ಹುಡುಗ ಬ್ಯಾಂಕ್‌ನಲ್ಲಿ ಕೆಲಸಮಾಡುವ ವಿಷಯ ತಿಳಿದು ಹುಡುಗಿ ಸುಖವಾಗಿ ಬದುಕ್ತಾಳೆ ಬಿಡು ಎಂದು ಸಂತೋಷದ ಉಸಿರು ಬಿಟ್ಟರು. ಮತ್ತೆ ಮಾತು, ಆ ಹುಡುಗಿ ತಟ್ಟೆಯಲ್ಲಿ ಹಣ್ಣುಹಂಪಲನ್ನು ತಂದು ಮಾಸ್ತಿಯವರ ಮುಂದಿಟ್ಟು ಕಾಲಿಗೆ ನಮಸ್ಕರಿಸಿದಳು. ಹುಡುಗಿಯ ತಲೆಯ ಮೇಲೆ ಕೈಯಿಟ್ಟು ಆಶೀರ್ವದಿಸಿದರು. ನನಗೂ ಹಣ್ಣು ಕೊಟ್ಟರು. ಒಂದು ಒಳ್ಳೆಯ ಮಾತನ್ನು ನನ್ನಿಂದ ಹೇಳಲಾಗಲಿಲ್ಲ. ನನ್ನೊಳಗಿನ ರ್‍ಯಾಷನಲಿಸಂ ಯಾ ರ್‍ಯಾಡಿಕಲಿಸಂ ಕಾರಣವಿರಬಹುದು. ಇಲ್ಲವೇ ಆಶೀರ್ವದಿಸುವ ವಯಸ್ಸನ್ನು ತಲುಪದಿದ್ದುದು ಕಾರಣವಿರಬಹುದು. ಆದರೆ ಆ ಹಣ್ಣಿಗೆ ಪ್ರತಿಫಲವಾಗಿ ಯಾವುದೇ ಸ್ವರೂಪದ 'ಥ್ಯಾಂಕ್ಸ್'ಗೆ ಸಮಾನವಾದ ಶಬ್ದ ಹೊರಗೆ ಬರಬೇಕಾಗಿತ್ತು, ಬರಲಿಲ್ಲ.

ಮನೆಯವರಿಗೆ ನಮಸ್ಕರಿಸಿ ಹೊರಗೆ ಬಂದೆವು. ಹಣ್ಣನ್ನು ಮಾಸ್ತಿಯವರ ಮನೆಗೆ ಹುಡುಗಿ ತಲುಪಿಸಿದಳು. ಮಾಸ್ತಿಯವರ ಮನೆ ತಲುಪಿದಾಗ ಹತ್ತೂವರೆಯಾಗಿತ್ತು. ಗೇಟಿನ ಶಬ್ದಕ್ಕೆ ಅವರ ಅಳಿಯ ಬಾಗಿಲು ತೆಗೆದರು. ಮಗಳಿಗೆ ಮತ್ತು ಅಳಿಯನಿಗೆ ನನ್ನನ್ನು ಪರಿಚಯ ಮಾಡಿಕೊಟ್ಟರು. ಕಾಫೀ ಬಂತು. ಒಂದು ಗಂಟೆ ಮಾತು ಸಾಗಿತು, ಮತ್ತೆ ಜಾತಿ ಬಂತು. ರಾಜಕೀಯ ಬಂತು. ಸಾಹಿತ್ಯ ಬಂತು. ಶೂದ್ರಕ್ಕೆ ಸಂದರ್ಶನ ತೆಗೆದುಕೊಳ್ಳಲು ಒಪ್ಪಿಗೆ ಪಡೆದು ಹೊರಬಂದೆ. "ಆದರೆ ಸಂಜೆ ಮಾತ್ರ ಬೇಡಪ್ಪ. ಯಾಕೆಂದರೆ ನಾನು ಕ್ಲಬ್ಬಿಗೆ ಹೋಗಬೇಕಾಗುತ್ತೆ" ಎಂದರು. ನಗುತ, "ಆಗಲಿ" ಎಂದೆ. ಮತ್ತೆ ಗೇಟಿನ ಹತ್ತಿರ ಹತ್ತು ನಿಮಿಷ ಮಾತುಕತೆ. "ನಿಮ್ಮ 'ಟಾಲ್‌ಸ್ಟಾಯ್ ಮಹರ್ಷಿಯ ಬೂರ್ಜ್ವ ವೃಕ್ಷಗಳು' ಕತೆ ತುಂಬ ಇಷ್ಟವಾಯಿತು ಸಾರ್" ಎಂದೆ. ಅವರು ಸಂತೋಷವನ್ನು ವ್ಯಕ್ತಪಡಿಸಲು ಹೆಗಲ ಮೇಲೆ ಕೈಹಾಕಿ ಅಪ್ಪಿಕೊಂಡರು.

ಮಾಸ್ತಿಯವರು "ಟಾಲ್‌ಸ್ಟಾಯ್ ದೊಡ್ಡ ಸಾಹಿತಿ ನಿಜ. ಆದರೆ ಆ 'ವಾರ್ ಅಂಡ್ ಪೀಸ್' ಇದೆಯಲ್ಲ ಅದು ಅಷ್ಟೊಂದು ದೊಡ್ಡ ಕೃತಿಯಲ್ಲ. ಅನಗತ್ಯವಾಗಿ ಬೆಳೆಸಿದ್ದಾರೆ" ಎಂದರು. ಕೊನೆಯದಾಗಿ ಸಂಕೋಚದಿಂದ ನನ್ನ ಜಾತಿ ಕೇಳಿದರು, "ರೆಡ್ಡಿ" ಎಂದೆ. ನಗುತ್ತ "ಶ್ರೀನಿವಾಸರೆಡ್ಡಿ, ರಾಘವೇಂದ್ರರಾವ್ ಜೊತೆಯಲ್ಲಿ ನಾಳೆ

ಬೆಳಿಗ್ಗನೇ ಬಾಪ್ಪ. ಸಂಜೆ ಮಾತ್ರ ಬರಬೇಡ" ಎಂದು ಮತ್ತೊಮ್ಮೆ ನೆನಪುಮಾಡಿ ನನ್ನನ್ನು ಕಳಿಸಿಕೊಟ್ಟರು. ರಸ್ತೆಗಿಳಿದಾಗ ಅದೇಗಾಜಿನ ಚೂರುಗಳು. ಮಕ್ಕಳ ಚಾಕಲೇಟ್ ತಾತಾ, ಕಾಲಿಗೆ ಬಿದ್ದ ಹುಡುಗಿಯ ನಮಸ್ಕಾರ ಇವೆಲ್ಲದರ ನೆನಪಿನ ಮೂಲಕ ಮಾಮೂಲಿ ಬದುಕಿನ ರಸ್ತೆಗಿಳಿದೆ.

ಮಾರನೆಯ ದಿನ ಬೆಳಗ್ಗೆ ಗೆಳೆಯ ರಾಘವೇಂದ್ರರಾವ್ ಜೊತೆಯಲ್ಲಿ ಮಾಸ್ತಿಯವರ ಮನೆಗೆ ಹೋದಾಗ ಹತ್ತೂವರೆಯಾಗಿತ್ತು. ವಾಕಿಂಗ್‌ಗೆ ಹೋಗಿ ಆಗ ತಾನೆ ವಾಪಸ್ಸು ಬಂದಿದ್ದರು. ಹೋದಾಕ್ಷಣ ಮಗಳಿಗೆ "ನೋಡಮ್ಮ ಶ್ರೀನಿವಾಸರೆಡ್ಡಿ ಬಂದ್ರು ಕಾಫೀ ತಂದು ಕೊಡಮ್ಮ" ಎಂದವರೇ ಮಗಳು ಬಂದಾಗ ರಾಘವೇಂದ್ರರಾವ್ ರವರನ್ನು ಪರಿಚಯಿಸಿದರು.

ಕಾಫೀ ಬಂತು. ರಾಘವೇಂದ್ರರಾವ್‌ರವರ ಹಿನ್ನೆಲೆಯಲ್ಲ ಕೇಳಿ ತಿಳಿದುಕೊಂಡರು. "ಆಗಲಪ್ಪ ಒಳ್ಳೆಯದಾಗಲಿ" ಎಂದರು. ಮಾತು ಬೆಳೆಯಿತು. ತಮ್ಮ ಸಾಹಿತ್ಯದ ಬಗ್ಗೆ ಹೆಚ್ಚು ಒತ್ತುಕೊಡದೆ ಅವರ ವಿಚಾರ ಸಾಹಿತ್ಯದ ಬಗ್ಗೆಯೇ ಹೆಚ್ಚು ಹೆಚ್ಚು ಮಾತಾಡತೊಡಗಿದರು. ಕೆಲವು ಬಾರಿಯಂತೂ ಮೂರುನಾಲ್ಕು ಪುಟಗಳಷ್ಟು ಓದಿ ವಿದ್ಯಾರ್ಥಿಗಳಿಗೆ ವಿವರಿಸುವಂತೆ ನಮಗೆ ಹೇಳತೊಡಗಿದರು, ಇಷ್ಟೆಲ್ಲ ಅವರಿಗೆ ತಮ್ಮ ವಿಚಾರಗಳ ಬಗ್ಗೆ ಸಾಕಷ್ಟು ಚರ್ಚೆಯಾಗಿಲ್ಲ ಎಂಬ 'ಗುಮ್ಮ'ನನ್ನು ಅವರು ತಲೆಯಲ್ಲಿತುಂಬಿಕೊಂಡಿದ್ದರು ಅನ್ನಿಸುತ್ತಿತ್ತು. ಹಾಗೆ ನೋಡಿದರೆ ನಮ್ಮಲ್ಲಿ ಯಾವುದರ ಬಗ್ಗೆಯೂ ಇನ್ನು ಗಂಭೀರವಾದ ಚರ್ಚೆನಡೆದಿಲ್ಲ. ಎಷ್ಟೋಜನ ನಮ್ಮ ಮುಖ್ಯ ಲೇಖಕರ ಬಗ್ಗೆಯೂ ಎಷ್ಟು ಚರ್ಚೆಯಾಗ ಬೇಕೋ ಅಷ್ಟು ಚರ್ಚೆಯಾಗಿಲ್ಲ ಎಂಬುದನ್ನು ಹೇಳಲು ಮನಸ್ಸು ಬಂದರೂ ಹೇಳಲಾಗಲಿಲ್ಲ.

ಮಾಸ್ತಿಯವರಿಗೆ 'ಕುವೆಂಪು' ಹೆಸರಿನ ಭೂತಗಾಢವಾಗಿರುವಂತೆ ಗೊತ್ತಾಗುತ್ತಿತ್ತು. ಕುವೆಂಪುರವರಿಗೆ ಬ್ರಾಹ್ಮಣ್ಯದ ಭೂತ ಬೆಳೆದಂತೆ. ಇದನ್ನು ಒಂದು ಮುಖ್ಯ ಕಾರಣಕ್ಕಾಗಿ ಪ್ರಸ್ತಾಪಿಸುತ್ತಿರುವುದು: ಶೂದ್ರತಪಸ್ವಿಯ ನಂತರ ಮಾಸ್ತಿ ಮತ್ತು ಕುವೆಂಪುರವರ ನಡುವಿನ ಚರ್ಚೆ ಸಾಂಸ್ಕೃತಿಕ ಸಂದರ್ಭದ ದಾಖಲಾತಿ ದೃಷ್ಟಿಯಿಂದ ಅತ್ಯಂತ ಮಹತ್ವಪೂರ್ಣವಾದದ್ದು. ಆದರೆ ಕುವೆಂಪುರವರು ಉಪಕುಲಪತಿಗಳಾದ ಮೇಲೆ ಅವರನ್ನು ಬೆಲೆಕಟ್ಟಲಾರದವರೆಲ್ಲ ಬರೆಯುತ್ತ ಹೋದರು. ತನಗಿಂತ ಕಿರಿಯರಾದ ಕುವೆಂಪುರವರ ಬಗ್ಗೆ ಹೆಚ್ಚು ಚರ್ಚೆಯಾಗುತ್ತಿದ್ದುದು — ಚರ್ಚೆಯನ್ನುವುದಕ್ಕಿಂತ ಪ್ರಚಾರ ಎಂದರೆ ಸಮಂಜಸವಾದೀತು. ಇದು ನಿಜವಾಗಿಯೂ ಮಾಸ್ತಿಯಂಥ ಲೇಖಕರಿಗೆ ಇರಿಸುಮುರಿಸು ಆಗಿರಲು ಸಾಧ್ಯ. ಕಳೆದ ಇಪ್ಪತ್ತೈದು ಮೂವತ್ತು ವರ್ಷಗಳಿಂದ ತಮ್ಮ ಬಗ್ಗೆ ಬರೆದವಿನನ್ನೂ ಓದಿಲ್ಲ ಎಂದು ಹೇಳುವ ಮಾಸ್ತಿ; ತನ್ನ ಕಾಲದಲ್ಲಿ

ಬರೆಯುತ್ತಿರುವ ಹೊಸಬರಹಗಾರರ ಬಗ್ಗೆಯೂ ಕುತೂಹಲ ಬೆಳೆಸಿಕೊಂಡವರಲ್ಲ. ಇದು ನಿಜವಾಗಿಯೂ ಆಶ್ಚರ್ಯದ ಸಂಗತಿ. ಅದರ ಹಿಂದಿರುವ ಮನೋಭಿಲಾಷೆಯ್ನು 'ಸಂಘರ್ಷ' ಎಂಥದ್ದು ಎಂದು ಹೇಳಲು ನಾನು ಹೊರಟಿಲ್ಲ. ಆದರೆ ತನ್ನನ್ನು ಕಡೆಗಣಿಸಿದ್ದಾರೆ ಎಂಬ ಅವರ ಅಂತರಂಗದ 'ಗುಸ ಗುಸು'ವಿಗೆ ಅವರ ಕಂಡುಕೊಳ್ಳ ಬಹುದಾದ ಉತ್ತರವಾಗಿತ್ತು. ಅದೇನೆ ಇರಲಿ "ಅನಂತಮೂರ್ತಿ ನನ್ನ ಬಗ್ಗೆ ಚೆನ್ನಾಗಿ ಬರೆದಿದ್ದಾರಂತೆ-ಒಳ್ಳೆಯ ಮನುಷ್ಯ" ಎಂದು ಹೇಳುವಲ್ಲಿಯೂ 94 ವರ್ಷದ ಮಾಸ್ತಿಯವರ ಒಳಗಿನ ಅಭೀಪ್ಸೆಯನ್ನು ಗುರ್ತಿಸುವುದು ಕಷ್ಟವಾಗಲಾರದು.

ಚರ್ಚೆ ನಡೆದೇ ಇತ್ತು, ರಾಘವೇಂದ್ರರಾವ್‌ರವರ ಪ್ರಶ್ನೆಗಳಿಗೆ ದೀರ್ಘವಾಗಿಯೇ ಉತ್ತರಕೊಡುತ್ತಿದ್ದರು. ಉತ್ತರ ಎನ್ನುವುದಕ್ಕಿಂತ 'ಲೋಕಾಭಿರಾಮ'ದ ಮಾತು ಕತೆಯಾಗಿತ್ತು. ಕಥೆಯನ್ನು ಹೇಳುವ ಕ್ರಮದಲ್ಲಿ ಹೇಳುತ್ತಿದ್ದುದರಿಂದ ಮತ್ತು ಮಧ್ಯೆ ಅದಕ್ಕೆ ಸಂಬಂಧಿಸಿದ ಉಪಕಥೆಗಳನ್ನು ಹೇಳುತ್ತಿದ್ದುದರಿಂದ ಆರಾಮವಾಗಿ ಕುಳಿತಿದ್ದೆವು.

ಒಂದು ಗಂಟೆಯಾಯಿತು. ನಮಗೂ ಅಡಿಗೆ ಮಾಡಿಸಿದ್ದರು. ಮಾಸ್ತಿಯವರ ಜೊತೆ ಅವರ ಅಳಿಯನೂ ಕೂತಿದ್ದರು. ಮಾಸ್ತಿಯವರ ಪುಸ್ತಕಗಳ ಮಾರಾಟದ ಜವಾಬ್ದಾರಿಯನ್ನು ಆತನೇ ತೆಗೆದುಕೊಂಡಿದ್ದನೆಂದು ಕಾಣುತ್ತೆ. ಅಂತೂ ಮಾತು ಕತೆಯ ನಡುವೆ ಆರಾಮವಾಗಿ ಊಟಮಾಡಿದರು. ಮಧ್ಯೆ ಮಧ್ಯೆ "ಸಂಕೋಚಪಟ್ಟು ಕೊಳ್ಳಬೇಡಿ ಊಟಮಾಡಿ" ಎನ್ನುತ್ತಿದ್ದರು. ನಮ್ಮಷ್ಟೇ ಊಟಮಾಡಿದರು. ನನಗೆ ಖುಷಿಯಾಯಿತು, ಈ ವಯಸ್ಸಿನಲ್ಲೂ ಇಷ್ಟು ಆರಾಮವಾಗಿ ಬದುಕುವುದನ್ನು ಕಂಡು. ನಂತರ ಗೌಡರ ರೀತಿಯಲ್ಲಿ ಕಡ್ಡಿತೆಗೆದುಕೊಂಡು ಹಲ್ಲುಗಳ ನಡುವೆ ಚುಚ್ಚುತ್ತ ಕೂತರು. ಸ್ವಲ್ಪ ಸಮಯದ ನಂತರ ಎದ್ದುಬಂದು ಓದಲು ಕೂತರು, ತಮ್ಮ ಮಾಮೂಲಿ ಜಾಗದಲ್ಲಿ ಪುಟ್ಟದಾದ ಮಂಚವಿತ್ತು. ಅಲ್ಲಿಯೇ ಗೋಡೆಗೆ ನೇತು ಹಾಕಿದ್ದ ಅವರ ತಾಯಿಯ ಭಾವಚಿತ್ರವಿತ್ತು. ಅವರ ಓದಿನ ನಡುವೆ ದೂರದಲ್ಲಿ ಕೂತಿದ್ದ ಅಳಿಯ ಗೊರಕೆ ಹೊಡೆಯುತ್ತಿದ್ದರು.

ಮಾಸ್ತಿಯವರು ಕಳೆದ ಮೂವತ್ತು ವರ್ಷಗಳಿಂದ ಅಪ್ಪಿ ತಪ್ಪಿ ಒಬ್ಬರನ್ನು ಒಂದು ಮಾತು ಬೈದಿಲ್ಲವಂತೆ, ಕಾರಣ: ಒಮ್ಮೆ ಅವರ ತಾಯಿಗೆ ಮನನೋಯುವ ವಂತೆ ಮಾತಾಡಿದ್ದರಂತೆ ಪೂಜೆಯ ಸಮಯದಲ್ಲಿ, ಇದೆಲ್ಲವನ್ನು ನೆನಸಿಕೊಂಡಾಗ ಆಶ್ಚರ್ಯವಾಗದಿರಲಾರದು., ಮಾಸ್ತಿಯವರು ವಿಮರ್ಶೆಯಿಂದ ದೂರ ಉಳಿದಿದ್ದು ಈಕಾರಣಕ್ಕಾಗಿಯೇ ಅನ್ನಿಸುತ್ತೆ. ಒಮ್ಮೆ ಯಾವುದೋ ಒಂದುವೇದಿಕೆಯ ಮೇಲೆ ಇವರೊಡನೆ ಕಟ್ಟೀಮನಿಯವರೂ ಇದ್ದರಂತೆ. ಆಗ ಕಟ್ಟೀಮನಿಯವರು "ನಿಮ್ಮನ್ನು ತೆಗಳಿ ಬಹಳ ವರ್ಷಗಳ ಹಿಂದೆ ಒಂದು ಪತ್ರ ಬರೆದಿದ್ದೆ. ನಿಮಗೆ ಬೇಸರವಾಗಿಲ್ಲ

ತಾನೇ" ಎಂದಾಗ ಅದಕ್ಕೆ ಮಾಸ್ತಿಯವರು " ಆ ಪತ್ರವನ್ನು ನಾನು ತೆರೆದೇ ಇಲ್ಲ. ಹಾಗೆಯೇ ಇದೆ" ಎಂದರಂತೆ,

ಇದೇ ಸಂದರ್ಭದಲ್ಲಿ ಸಾಹಿತ್ಯ ಪರಿಷತ್ತಿನ ಚುನಾವಣೆಗೆ ಸಂಬಂಧಿಸಿದ ಗಲಾಟೆ ನಡೆದಿತ್ತು. ನಾವು ಅದರಬಗ್ಗೆ ಅಭಿಪ್ರಾಯ ಕೇಳಿದೆವು. ಮೊದಲದಿನ ಏನನ್ನು ಹೇಳಲಿಲ್ಲ, ಮತ್ತೆ ಮಾರನೆಯದಿನ ಮಾತಿನ ನಡುವೆ "ಜವರೇಗೌಡರಿಗಿಂತ ಹಂಪನಾಗರಾಜಯ್ಯ ಒಳ್ಳೆಯವನೆನ್ನಿಸುತ್ತೆ" ಎಂದರು. ಮುಂದೆ ಅದನ್ನು ಬೆಳೆಸಲು ಹೋಗಲಿಲ್ಲ. ಆದರೆ ಆ ಕ್ಷಣ ಜವರೇಗೌಡರು ಕುವೆಂಪು ಅಧ್ಯಯನ ಟ್ರಸ್ಟಿನ ಅಧ್ಯಕ್ಷರಾಗಿರುವುದರಿಂದ ಹಳೆಯ ವಾಸನೆ ಕಾಡುತ್ತಿರಬಹುದು ಅಂದುಕೊಂಡೆ. ಇದಕ್ಕಿಂತ ಮಿಗಿಲಾಗಿ ಮಾಸ್ತಿಯವರಿಗೆ ಗೌಡರಬಗ್ಗೆ ಮತ್ತು ಲಿಂಗಾಯಿತರ ಬಗ್ಗೆ ವಿಚಿತ್ರರೀತಿಯ ಅಭಿಪ್ರಾಯ ತಳೆದಂತೆ ಕಾಣುತ್ತಿತ್ತು. ಇದರ ತಪ್ಪುನೆಪ್ಪಿನ ಬಗ್ಗೆ ಪರಾ ಎಳೆಯಲು ಹೋಗುತ್ತಿಲ್ಲ. ಇದರ ಹಿನ್ನೆಲೆಯನ್ನು ತಿಳಿಯುವ ಕುತೂಹಲ ನನಗಿತ್ತು. ಅದನ್ನು ಮೂರುದಿನಗಳಲ್ಲಿ ಕೊಟ್ಟರು.

ಇವರ ಜೀವನ ಸಿದ್ಧಾಂತದ ಬಗ್ಗೆ ಪಟ್ಟಿಮಾಡುತ್ತ ಹೋದಂತೆಲ್ಲ ಕೊನೆಗೂ ನನ್ನಂಥವರಿಗೆ ಅನ್ನಿಸುವುದು: ಇಷ್ಟುಮಾತ್ರ ಗ್ರಹಿಸಲು ಸಾಧ್ಯ ಎಂಬುದು. ಯಾಕೆಂದರೆ ಇವರ ವ್ಯಕ್ತಿತ್ವದ ಹಿಂದಿರುವ ಗಾಢವಾದ ಶಿಸ್ತಿನ ಮುಂದೆ ನಾವು ಸಣ್ಣವರು ಅಥವಾ ದೊಡ್ಡವರು ಎಂದು ಹೇಳಲಾಗದವರು. ನೇರವಾಗಿ ನನ್ನ ಮಟ್ಟಿಗೆ ಹೇಳಬೇಕೆಂದರೆ ಆ ರೀತಿಯಲ್ಲಿ ಬದುಕಲಾರದವನು, ಕಾರಣವಿಷ್ಟೆ: ನಮ್ಮ ಹುಚ್ಚುತನಗಳು ಆರೀತಿ ಇರುತ್ತವೆ,

28-2-85 ಶೂದ್ರಶ್ರೀನಿವಾಸ್

## ಗೌರಮ್ಮನ ಹಸಿದೊಡಲಿನಲ್ಲಿ ಮಗುವೊಂದು ಆಕಾರ ತಳೆಯುತ್ತಿತ್ತು. ಆದರೂ ಅವಳು ದುಡಿಯುತ್ತಲೇ ಇದ್ದಳು.

### ಈಗ ಆಕೆಗೆ ದುಡಿಮೆಯಿಂದ ವಿರಾಮ

### ರಾಜ್ಯ ಸರ್ಕಾರದ ನೆರವಿನಿಂದ

ಭೂರಹಿತ ಮಹಿಳಾ ಕೃಷಿ ಕಾರ್ಮಿಕರಿಗೆ ಹೆರಿಗೆ ಭತ್ಯ ನೀಡುವ ಕರ್ನಾಟಕ ಸರ್ಕಾರದ ಯೋಜನೆಯಿಂದ ಈಗ ದಿನ ತುಂಬಿದ ಗರ್ಭಿಣಿಯರಿಗೆ ಹೊಸ ಆಸರೆ ಸಿಕ್ಕಂತಾಗಿದೆ.

ಗೌರವ್ವನದು ಕೂಲಿಕಾರರ ಕುಟುಂಬ. ಬೆಳಗಿನಿಂದ ಸಂಜೆಯವರೆಗೂ ಹೊಲದಲ್ಲಿ ಮೈ ಮುರಿಯುವಂತಹ ದುಡಿಮೆ. ಹಾಗಿದ್ದರೂ ಆಕೆಯ ಮುಖದ ಮೇಲೆ ದಿನತುಂಬಿದ ಗರ್ಭಿಣಿಯ ಕಳೆ. ಆಗಾಗ ತಲೆ ತಿರುಗಿ ಬೀಳುವ ಸ್ಥಿತಿ. ಆದರೆ ಆಕೆಯು ದುಡಿಯದೆ ಬೇರೆ ದಾರಿಯಿಲ್ಲ. ಕುಟುಂಬದ ಹೊಟ್ಟೆ ತುಂಬಲು ಆಕೆಯ ದಿನಕೂಲಿ ಬೇಕೇಬೇಕು. ಕರ್ನಾಟಕ ಸರ್ಕಾರ ಭೂರಹಿತ ಮಹಿಳಾ ಕೃಷಿ ಕಾರ್ಮಿಕರಿಗೆ ಹೆರಿಗೆ ಭತ್ಯೆ ನೀಡುವ ತನ್ನ ಕ್ರಾಂತಿಕಾರಿ ಯೋಜನೆಯನ್ನು ಅನುಷ್ಠಾನಕ್ಕೆ ತಂದಾಗ ಆಕೆಗೂ ಆಕೆಯ ಕುಟುಂಬಕ್ಕೂ ಹೊಸದೊಂದು ಆಸರೆ ದೊರೆಯಿತು.

ಈ ಯೋಜನೆಯಿಂದಾಗಿ ಭೂರಹಿತ ಮಹಿಳಾ ಕೃಷಿ ಕಾರ್ಮಿಕರು ತುಂಬು ಗರ್ಭಿಣಿಯರಾದ ಕಾಲದಲ್ಲಿ ಮೂರು ತಿಂಗಳವರೆಗೆ ತಿಂಗಳಿಗೆ ರೂ. 100 ರಂತೆ ಒಟ್ಟು ರೂ. 300 ಹೆರಿಗೆ ಭತ್ಯ ಪಡೆಯುತ್ತಾರೆ. ಈ ಭತ್ಯ ಮೊದಲ ಹಾಗೂ ಎರಡನೆಯ ಮಗುವಿನ ಜನನ ಕಾಲದಲ್ಲಿ ಲಭ್ಯ.

ಅನುಷ್ಠಾನಕ್ಕೆ ಬಂದ ನಾಲ್ಕೇ ತಿಂಗಳಲ್ಲಿ 1,514 ಮಂದಿ ಮಹಿಳಾ ಕೃಷಿ ಕಾರ್ಮಿಕರು ಈ ಯೋಜನೆಯ ಪ್ರಯೋಜನ ಪಡೆದಿದ್ದಾರೆ. ಹೌದು, ರಾಜ್ಯ ಸರ್ಕಾರ ದೀನದಲಿತರಿಗಾಗಿ ಏನು ಮಾಡಿದೆ ಎಂಬುದಕ್ಕೆ ಇದೊಂದು ನಿದರ್ಶನ· ಭೂರಹಿತ ಕೃಷಿ ಕಾರ್ಮಿಕರಿಂದ ಹಿಡಿದು ಅನಾಥ ವಿಧವೆಯರವರೆಗೆ, ಪರಿಶಿಷ್ಟ ಜಾತಿ ಮತ್ತು ಪಂಗಡದವರಿಂದ ಹಿಡಿದು ಎಲ್ಲ ಹಳ್ಳಿಗಳಲ್ಲಿರುವ ಕುಟುಂಬಗಳಿಗೆ ಕಲ್ಯಾಣವನ್ನುಂಟು ಮಾಡಿದೆ.

"ಕರ್ನಾಟಕ ವಾರ್ತೆ"

## ಜಾತ್ಯಾತೀತ ಪ್ರಗತಿಪರ ಐಕ್ಯಭಾರತ ನಿರ್ಮಾಣಕ್ಕೆ ಇಂದು ಮತ್ತೊಮ್ಮೆ ಪಣ ತೊಡೋಣ

### ಈ ಚಿರಸ್ಮರಣೀಯ ದಿನದಂದು

### 35 ವರ್ಷಗಳ ಹಿಂದೆ ಭಾರತದ ಜನತೆ ತನ್ನ ಆಶೆ, ಆಕಾಂಕ್ಷೆಗಳನ್ನು ವಿಜಯ ಪತಾಕೆಯೊಂದಿಗೆ ಅಭಿವ್ಯಕ್ತಿಗೊಳಿಸಿತು.

ನಮ್ಮ ದೇಶದ ಪ್ರತಿಯೊಂದು ರಾಜ್ಯವೂ ಜನತೆಯ ಆಸೆ, ಆಶೋತ್ತರಗಳನ್ನು ಪ್ರತಿಬಿಂಬಿಸುತ್ತದೆ. ಇಡೀ ರಾಷ್ಟ್ರದ ವೈಭವವನ್ನು ಸಾರುತ್ತದೆ. ಪ್ರತಿ ರಾಜ್ಯವೂ ಈ ದಿಸೆಯಲ್ಲಿ ತನ್ನದೇ ಆದ ಕೊಡುಗೆಯನ್ನು ನೀಡಿದೆ.

ಅನಾದಿ ಕಾಲದಿಂದಲೂ ಕರ್ನಾಟಕದ ಜನತೆ ಸಹಿಷ್ಣುಪರರು. ಇಲ್ಲಿ ಜೈನ ಮತ್ತು ಬೌದ್ಧ ಮತಗಳು ಪ್ರವೃದ್ಧಮಾನಗೊಂಡವು. ಕರ್ನಾಟಕದೊಂದಿಗೆ ಶಂಕರ, ಮಾಧ್ವ, ರಾಮಾನುಜ ಮತ್ತು ಬಸವಣ್ಣನವರ ನಂಟು ಅಪಾರ. ಅಮೋಘ. ಅನಂತರ ಮುಸಲ್ಮಾನರ ಮತ್ತು ಕ್ರೈಸ್ತ ಗುರುಗಳು ಹಿಂದೂ ಸಂತರು ಸಹಿಷ್ಣುತೆಯ ತತ್ವವನ್ನು ಶ್ರೀಮಂತಗೊಳಿಸಿದರು.

ಇದು ಕರ್ನಾಟಕ ರಾಜ್ಯ. ಪರರ ಬಗ್ಗೆ ಅಪಾರ ಆದರ, ದ್ವೇಷ ರಹಿತ, ಸಹನಾಭಾವ, ಪ್ರಾಯಶಃ ಇತಿಹಾಸ ಕಲ್ಪಿಸಿಕೊಟ್ಟ ಪಾಠ. ಗಂಗರು, ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ಮೌರ್ಯರು ಮತ್ತು ವಿಜಯನಗರದ ರಾಯರುಗಳು ತಮ್ಮ ಶ್ರೀಮಂತ ಸಂಸ್ಕೃತಿಯನ್ನು ಇಲ್ಲಿ ಉಳಿಸಿಹೋಗಿದ್ದಾರೆ.

19ನೆಯ ಶತಮಾನದ ಅಂತ್ಯದ ವೇಳೆಗೆ ರಾಷ್ಟ್ರೀಯ ಭಾವ ಉದ್ದೀಪನಗೊಂಡು ದೇಶಭಕ್ತಿ ಪ್ರಚೋದನೆಗೊಂಡಿತು. ಟಿಪ್ಪುಸುಲ್ತಾನರಿಂದ ಕಿತ್ತೂರು ರಾಣಿ ಚೆನ್ನಮ್ಮನವರೆಗೆ ನಾನಾ ಮತಗಳ ನಾಯಕರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಸ್ವಾತಂತ್ರ್ಯಗಳಿಕೆಗೆ ಶ್ರಮ ವಹಿಸಿದ್ದಾರೆ.

ಕೈಗಾರಿಕಾಕ್ರಾಂತಿಯಲ್ಲೂ ಕರ್ನಾಟಕ ಮುಂಚೂಣಿಯಲ್ಲಿದೆ. ವಿಶ್ವೇಶ್ವರಯ್ಯನವರಂತಹ ದಿಗ್ಗಜರು ಹಾಕಿದ ದಾರಿಯಲ್ಲಿ ನಡೆದಿದೆ. ಇಂದು ಎಲ್ಲರಿಗೂ ಶಿಕ್ಷಣ ಉಚಿತವಾಗಿ ಲಭ್ಯವಾಗಿದೆ. ಶೇಕಡ 80ಕ್ಕೂ ಹೆಚ್ಚು ಗ್ರಾಮೀಣ ಪ್ರದೇಶಗಳಿಗೆ ಕುಡಿಯುವ ನೀರು ಮತ್ತು ವಿದ್ಯುಚ್ಛಕ್ತಿ ಒದಗಿಸಲಾಗಿವೆ. ಶಿಶು ಮತ್ತು ಮಹಿಳಾ ಕಲ್ಯಾಣ ಮತ್ತು ಗ್ರಾಮಾಂತರ ಪ್ರದೇಶದ ಜನರ ಆರೋಗ್ಯಕ್ಕೆ ಗಮನ. ಜನತೆಯ ಆಶಯಗಳನ್ನು ಕ್ರಮೇಣ ಈಡೇರಿಸಲಾಗುತ್ತಿದೆ.

ಸಾಧಿಸಬೇಕಾದುದು ಇನ್ನೂ ಬಹಳವಿದೆ.

ಇಂದು ಕರ್ನಾಟಕದ ಜನತೆ ಅವರ ಗುರಿಯತ್ತ ಮುನ್ನಡೆದಿದ್ದಾರೆ.

"ಕರ್ನಾಟಕ ವಾರ್ತೆ"

## ಸಾದರ ಸ್ವೀಕಾರ

**ಪರಂಜ್ಯೋತಿ ವೇಮನ,** (ವಿಚಾರ) ಬಿ.ಎನ್. ರಾಮರೆಡ್ಡಿ,
ಪ್ರಕಾಶಕರು : ಕರ್ನಾಟಕರೆಡ್ಡಿ ಜನಸಂಘ, ನಂ 208, 'ಎನ್' 1ನೆಯ ಬ್ಲಾಕು ರಾಜಾಜಿನಗರ, ಬೆಂಗಳೂರು-10. ಬೆಲೆ : 16 ರೂ.

**ನೊದಲು ಗೊತ್ತಿರಲಿಲ್ಲ,** (ಕವನ ಸಂಕಲನ) ಕೆ.ಎಂ. ಮುನಿಕೃಷ್ಣಪ್ಪ,
ಕನ್ನಡ ಸಂಘ. ಕ್ರೈಸ್ಟ್ ಕಾಲೇಜ್. ಹೊಸೂರು ರಸ್ತೆ. ಬೆಂಗಳೂರು-29. ಬೆಲೆ : 12ರೂ.

**ಭರತನಗರಿ,** (ಕಾದಂಬರಿ) ಬರಗೂರು ರಾಮಚಂದ್ರಪ್ಪ,
ಪುಸ್ತಕ ಚಂದನ 278/8, 20ನೇ ಮುಖ್ಯ ರಸ್ತೆ, ವಿಜಯನಗರ, ಬೆಂಗಳೂರು-40. ಬೆಲೆ ; 6 ರೂ.

**ಖಾಸನೀಸರ ಕತೆಗಳು,** ರಾಘವೇಂದ್ರ ಖಾಸನೀಸ.
ಅಂಕಣಪ್ರಕಾಶನ, ಮಾರಾಟಗಾರರು 'ಪುಸ್ತಕ ಚಂದನ'ದವರು. ಬೆಲೆ : 15 ರೂ.

**ಬಿದೆ ಬಂತು ಬಿನಕನಿಗೆ,** (ಕಾದಂಬರಿ) ಜಿ.ಎಂ. ಕೃಷ್ಣಮೂರ್ತಿ,
ಉದಯೋನ್ಮುಖ ಪ್ರಕಾಶನ, 159, 2ನೇ ಮುಖ್ಯ ರಸ್ತೆ, ಚಾಮರಾಜಪೇಟೆ, ಬೆಂಗಳೂರು–18. ಬೆಲೆ : 10 ರೂ.

**ನನ್ನ ಧಣಿಗೆ ನನ್ನ ದನಿ,** (ಕವನ ಸಂಕಲನ) ಪ್ರಹ್ಲಾದ ಅಗಸನ ಕಟ್ಟೆ,
ಪ್ರಕಾಶಕರು : ತೇಜಸ್ವಿ ಪ್ರಕಾಶನ, ಬೆಂಗಳೂರು-18. ಬೆಲೆ : 6 ರೂ.

**ಮೌನ ಮೊಗ್ಗೊಡೆದಾಗ,** (ಕತೆ. ಕವನ ಲೇಖನಗಳ ಸಂಗ್ರಹ) ವೇದಿಕೆ ಪ್ರಕಾಶನ, ಆನವಟ್ಟಿ–577 413. ಬೆಲೆ : 10 ರೂ.

**ಮಾತು ಮತ್ತು ಪರಸ್ಪರ,** (ಕವನ ಸಂಕಲನ) ಮಹಾಬಲಮೂರ್ತಿ,
ಮೈತ್ರಿ ಪ್ರಕಾಶನ, ಗೋಕರ್ಣ. ಬೆಲೆ : 12 ರೂ.

**ಕನಸುಗಳೇ ಬನ್ನಿ,** (ಕವನ ಸಂಕಲನ) ರಾಮಚಂದ್ರಪ್ಪೈ
ಕನ್ನಡ ಸಂಘ : ಕಾಂತಾವರ : ಕಾರ್ಕಳ (ತಾ) ದ.ಕ. ಬೆಲೆ : 7-50 ರೂ.

**ಸಾಹಿತ್ಯ ತತ್ವ:** ಬೇಂದ್ರೆ ದೃಷ್ಟಿ, ಕೆ.ವಿ. ನಾರಾಯಣ,
ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಹೊಸೂರು ರಸ್ತೆ, ಬೆಂಗಳೂರು-27. ಬೆಲೆ : 5 ರೂ.

F/NP/KRNU/72 No. M (2)PRB 211/73-74

Shoodra Kannada Monthly

ಏಪ್ರಿಲ್ ಸಂಚಿಕೆಯಲ್ಲಿ :

ಪ್ರೊ. ಬಿ. ಸಿ. ರಾಮಚಂದ್ರಶರ್ಮ—ಬಿ. ಎಸ್. ವೆಂಕಟಲಕ್ಷ್ಮಿ—ಟಿ. ಪಿ. ಅಶೋಕ್—ಪದ್ಮರಾಜ ದಂಡಾವತಿ—ಚಂಪಾವತಿ—ರಂಜಿನಿ—ಬಿ. ಎಸ್. ಗಾಯತ್ರಿ—ರಾಮಚಂದ್ರ ಪೈ — ಸತ್ಯನಾರಾಯಣರಾವ್ ಪಿಸ್ಸೆ — ಜಿ. ವಿ. ಆನಂದಮೂರ್ತಿ—ಕನಸಿಗೊಂದು ಕಣ್ಣು--ನಮ್ಮ ರಂಗಭೂಮಿ--ನಾಟಕೋತ್ಸವದ ನಾಟಕಗಳು ಇತ್ಯಾದಿ.



Printed at : Shalivahan Printers, Bangalore-53.
Editor & Publisher: M. SRINIVAS